

೭೫ ನೇ ಅಖಿಲ ಭಾರತ
ಅಮೃತ ಮಹೋತ್ಸವ
ಕನ್ನಡ ಸಾಹಿತ್ಯ ಸಮ್ಮೇಳನ
ಚಿತ್ರದುರ್ಗ

## ಕನಕದಾಸರ ವಿರಚಿತ

# ಹರಿಭಕ್ತಿಸಾರ

ಗದ್ಯಾನುವಾದ:

ವಿದ್ವಾನ್ ಎನ್. ರಂಗನಾಥಶರ್ಮಾ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮.

ರಾಮಕೃಷ್ಣ ಭಟ್ಟ, ಕೋಟೇಲು
೨೮-೪-೧೧

೭೫ನೇ ಅಖಿಲ ಭಾರತ ಅಮೃತ ಮಹೋತ್ಸವ ಕನ್ನಡ ಸಾಹಿತ್ಯ ಸಮ್ಮೇಳನ - ಚಿತ್ರದುರ್ಗ

ಕನಕದಾಸರ ವಿರಚಿತ

# ಹರಿಭಕ್ತಿಸಾರ

ಗದ್ಯಾನುವಾದ
ವಿದ್ವಾನ್ ಎನ್. ರಂಗನಾಥಶರ್ಮಾ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

**KANAKADASARA HARIBHAKTHISARA**
Prose rendering by : Vidvan N. Ranganatha Sharma
Published by : Kannada Sahitya Parishat
Pampa Mahakavi Road, Chamarajapet, Bangalore - 560018
Pages : 46 + iv    Price : Rs. **20-00** ;   **2009**

ಮುದ್ರಣದ ವರ್ಷ : ೨೦೦೯
ಪ್ರತಿಗಳು : ೧೦೦೦
ಬೆಲೆ : ಇಪ್ಪತ್ತು ರೂಪಾಯಿಗಳು



ಪ್ರಕಟಣಾ ಸಮಿತಿ

ಅಧ್ಯಕ್ಷರು – ಡಾ. ನಲ್ಲೂರು ಪ್ರಸಾದ್. ಆರ್.ಕೆ.
ಸಂಚಾಲಕರು – ಶ್ರೀ ಎಚ್.ಕೆ. ಮಳಲಿಗೌಡ

ಸದಸ್ಯರು

ಶ್ರೀ ಟಿ.ಎಸ್.ದಕ್ಷಿಣಾಮೂರ್ತಿ
ಡಾ. ಗಿರಡ್ಡಿ ಗೋವಿಂದರಾಜ
ಪ್ರೊ. ಎಸ್.ಜಿ.ಸಿದ್ಧರಾಮಯ್ಯ
ಶ್ರೀ ಬಿ.ಆರ್.ಪೊಲೀಸ್ ಪಾಟೀಲ
ಶ್ರೀ ಮಾನಸ
ಶ್ರೀ ಪ್ರದೀಪ್‌ಕುಮಾರ ಕಲ್ಕೂರ
ಶ್ರೀ ಪುಂಡಲೀಕ ಹಾಲಂಬಿ
ಡಾ. ಎಚ್. ಜಯಮ್ಮ ಕರಿಯಣ್ಣ
ಶ್ರೀ ಕುಂ.ವೀರಭದ್ರಪ್ಪ
ಶ್ರೀ ವಿಷ್ಣು ನಾಯ್ಕ
ಡಾ. ಬೈರಮಂಗಲ ರಾಮೇಗೌಡ

ಸಮ್ಮೇಳನಾಧ್ಯಕ್ಷರು – ಪ್ರೊ. ಎಲ್. ಎಸ್. ಶೇಷಗಿರಿರಾವ್
೭೪ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

ನಿರ್ದೇಶಕರು – ಶ್ರೀ ಮನು ಬಳಿಗಾರ್
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಮುಖಪುಟ ವಿನ್ಯಾಸ : ಶ್ರೀ ಪ.ಸ. ಕುಮಾರ್

ಮುದ್ರಣ : ಬಿ.ಎಂ. ಶ್ರೀ ಅಚ್ಚುಕೂಟ ಆಫ್‌ಸೆಟ್, ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಬಿ.ಎಂ.ಶ್ರೀ. ಅಚ್ಚುಕೂಟ ಪ್ರಾರಂಭವಾದಾಗಿನಿಂದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರಿಗೆ ಬೇಕಾಗುವ ಸಾಹಿತ್ಯವನ್ನು ಕಾಲಕಾಲಕ್ಕೆ ಕೊಡುತ್ತಾ ಬಂದಿದೆ. ಪರಿಷತ್ತು ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದ ಈ ದೀರ್ಘ ಅವಧಿಯಲ್ಲಿ ಅಧ್ಯಕ್ಷರು ಮತ್ತು ಪ್ರಕಟಣಾ ಸಮಿತಿ ಸಹೃದಯ ಓದುಗರ ಅಭಿರುಚಿಗೆ ಸ್ಪಂದಿಸಿರುವುದಲ್ಲದೆ ಸದಭಿರುಚಿಯನ್ನು ನಿರ್ಮಾಣ ಮಾಡುವ ಕೆಲಸವನ್ನು ಎಚ್ಚರದಿಂದ ಮಾಡುತ್ತಾ ಬಂದಿದ್ದಾರೆ. ಎಲ್ಲ ಕ್ಷೇತ್ರಗಳಿಂದ ಹರಿದುಬರುವ ಜ್ಞಾನಧಾರೆಗಳನ್ನು ಹಿಡಿದುಕೊಟ್ಟು ಲೋಕಜ್ಞಾನವನ್ನು ಓದುಗರಲ್ಲಿ ತುಂಬುವ, ಅವರ ಅರಿವಿನ ದಿಗಂತಗಳನ್ನು ವಿಸ್ತರಿಸುವ, ಆತ್ಮವಿಶ್ವಾಸವನ್ನು ಹುಟ್ಟಿಸುವ ಕೆಲಸಕ್ಕೆ ಪರಿಷತ್ತು ವೇದಿಕೆಯಾಗಿದೆ. ವಿವಿಧ ಜ್ಞಾನ ಶಿಸ್ತುಗಳಲ್ಲಿ ಪರಿಣಿತರಾದವರನ್ನು ಗುರುತಿಸಿ ಅವರಿಂದ ಪುಸ್ತಕ ಬರೆಸಿದೆ. ಸ್ವಯಂಪ್ರೇರಿತರಾಗಿ ಪ್ರಕಟಣೆಗೆ ಹಸ್ತಪ್ರತಿಗಳನ್ನು ಸಲ್ಲಿಸಿದ ಸಂದರ್ಭದಲ್ಲಿ ಅವುಗಳಲ್ಲಿ ಉತ್ತಮವಾದವುಗಳನ್ನು ಆಯ್ದು ಪ್ರಕಟಿಸಿದೆ. ವಿಚಾರ ಸಂಕಿರಣಗಳನ್ನು ನಡೆಸಿ, ಅಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪ್ರಾತಿನಿಧಿಕವೆನಿಸುವ ಕೃತಿಗಳನ್ನು ಹೊರತಂದಿದೆ. ಪುಸ್ತಕ ದತ್ತಿಯಿಂದ ಮೌಲಿಕ ಕೃತಿಗಳನ್ನು ಪ್ರಕಟಿಸಿದೆ. ಕರ್ನಾಟಕ ಸರ್ಕಾರದ ಧನಸಹಾಯದ ನೆರವಿನಿಂದಲೂ ಎಲ್ಲರಿಗೆ ಎಲ್ಲ ಕಾಲಗಳಲ್ಲೂ ಉಪಯುಕ್ತವಾಗುವ ನಿಘಂಟು, ಕೋಶಗಳನ್ನು ಪ್ರಕಟಿಸಿದೆ.

ವಿವಿಧ ಸಂದರ್ಭಗಳಲ್ಲಿ ಹೊರಬಂದ ಕೃತಿಗಳಲ್ಲಿ ಕೆಲವು ಮತ್ತೆ ಮತ್ತೆ ಪ್ರಕಟವಾಗುವ ಭಾಗ್ಯವನ್ನು ಪಡೆದುಕೊಂಡಿವೆ. ಹಳಗನ್ನಡ ಕಾವ್ಯಗಳ ಗದ್ಯಾನುವಾದ, ಜೀವನ ಚರಿತ್ರೆ, ಸಾಹಿತ್ಯ ಪರೀಕ್ಷೆಗಳ ಪಠ್ಯಪುಸ್ತಕಗಳು, ನಾಟಕ ಸಂಪುಟ, ವಿಮರ್ಶೆ, ಸಂಶೋಧನೆ, ಪ್ರಬಂಧ ಮುಂತಾದ ಪ್ರಕಾರಗಳಲ್ಲಿ ಹೆಚ್ಚು ಬೇಡಿಕೆ ಇರುವ ಪುಸ್ತಕಗಳನ್ನು ಮರುಮುದ್ರಣದ ಮೂಲಕ ಸಹೃದಯರಿಗೆ ತಲುಪಿಸುವುದು ಪರಿಷತ್ತಿನ ಕರ್ತವ್ಯವಾಗಿದೆ. ಅಯ್ಯೋ, ಇಂಥ ಪುಸ್ತಕ ಸಿಗಲಿಲ್ಲವಲ್ಲ ಎಂದು ಕನ್ನಡಿಗರು ಕೊರಗದಂತೆ ನೋಡಿಕೊಳ್ಳಬೇಕಾಗಿದೆ.

ನಾಡು ನುಡಿಯ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡು ಕನ್ನಡಿಗರ ಮನಸ್ಸಿನಲ್ಲಿ ಚಿರಸ್ಮರಣೀಯರಾಗಿರುವ ಮಹನೀಯರ ಜೀವನ-ಕಾರ್ಯಗಳನ್ನು ಪರಿಚಯಿಸುವ ಪುಸ್ತಕಗಳು, ಕುವೆಂಪು, ಡಿ.ವಿ.ಜಿ., ಕೆ.ಎಸ್.ನ., ಎ.ಎನ್.ಮೂರ್ತಿರಾವ್, ಗೊರೂರು, ಶಂ.ಬಾ.ಜೋಶಿ, ಆಲೂರು ವೆಂಕಟರಾಯರು ಮುಂತಾದ ಸಾಹಿತ್ಯ ದಿಗ್ಗಜಗಳ ಪುಸ್ತಕಗಳು, ಕನ್ನಡ ನಾಡಿನ ಚರಿತ್ರೆಯನ್ನು ಸಾದ್ಯಂತವಾಗಿ ಕಟ್ಟಿಕೊಡುವ

ಹಿರಿಯ ಸಂಶೋಧಕರ ಪುಸ್ತಕಗಳು, ಹಳಗನ್ನಡದ ಮಹಾಕವಿಗಳ ಮಹತ್ವವನ್ನು ಸಾದರಪಡಿಸುವ ಪುಸ್ತಕಗಳು, ಹಳಗನ್ನಡ, ನಡುಗನ್ನಡದ ಶ್ರೇಷ್ಠ ಕಾವ್ಯಗಳು ಅಮೃತ ಮಹೋತ್ಸವ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಬಿಡುಗಡೆಯಾಗುತ್ತಿದ್ದು, ಇವು ಕನ್ನಡಿಗರ ಮನೆಗಳಲ್ಲಿ ಅತ್ಯವಶ್ಯಕವಾಗಿ ಸೇರ್ಪಡೆಗೊಳ್ಳುವಂಥವಾಗಿವೆ ; ಆಗಾಗ ತಿರುವಿಹಾಕಲು, ಮನನ ಮಾಡಲು ಯೋಗ್ಯವಾದವುಗಳಾಗಿವೆ.

ಇವತ್ತಿನ ಸಂದರ್ಭದಲ್ಲೂ ಬೇರೆ ಬೇರೆ ಪ್ರಕಾಶನ ಸಂಸ್ಥೆಗಳು ಹೊರತರುತ್ತಿರುವ ಕೃತಿಗಳ ಜೊತೆಯಲ್ಲಿ ಹೋಲಿಸಿದರೆ ಪರಿಷತ್ತಿನ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ. ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ಈ ನೀತಿಗೆ ಬೆನ್ನೆಲುಬಾಗಿದೆ. ತಮಿಳು, ತೆಲುಗು, ಮಲೆಯಾಳಂ ಮಾತೃಭಾಷೆಯವರೂ ಕರ್ನಾಟಕದಲ್ಲಿ ಕನ್ನಡಿಗರಾಗಿರಬೇಕೆಂದು ಬಯಸುವ ಪರಿಷತ್ತು ಅಂಥವರಿಗೆ ಸಹಾಯಕವಾಗುವಂತೆ ಸ್ವಯಂಬೋಧಿನಿಗಳನ್ನು ರೂಪಿಸಿರುವುದು ಅಕ್ಕಪಕ್ಕದ ರಾಜ್ಯಗಳವರ ಜೊತೆ ಪರಿಷತ್ತು ತೋರುತ್ತಾ ಬಂದಿರುವ ಭ್ರಾತೃ ವಾತ್ಸಲ್ಯದ ಸಂಕೇತವಾಗಿದೆ.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಪುಸ್ತಕಗಳನ್ನು ಮತ್ತು ಹೊಸ ಪುಸ್ತಕಗಳನ್ನು ಚಿತ್ರದುರ್ಗದಲ್ಲಿ ನಡೆಯುತ್ತಲಿರುವ ಅಖಿಲ ಭಾರತ ೭೫ನೆಯ ಅಮೃತ ಮಹೋತ್ಸವ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ ಭರವಸೆ ನನಗಿದೆ. "ಮಾತಿಗೆ ನಾಶಪಡಿಸುವ ಹಾಗೂ ಶಮನಗೊಳಿಸುವ ಶಕ್ತಿಯಿದೆ. ಸತ್ಯ ಮತ್ತು ದಯೆಯನ್ನು ಸಮ್ಮಿಲನಗೊಳಿಸುವ ಶಕ್ತಿಯೂ ಉಂಟು. ಅಷ್ಟೇ ಅಲ್ಲ ಮಾತಿಗೆ ವಿಶ್ವವನ್ನು ಬದಲಾಯಿಸುವ ಶಕ್ತಿ ಇದೆ" ಎಂದಿದೆ ಬುದ್ಧವಾಣಿ. ಇದು ಮಾತಿಗಿರುವ ಶಕ್ತಿ ಮತ್ತು ಮಾತನ್ನೇ ಕೃತಿಯಾಗಿಸುವ ಬರಹಕ್ಕಿರುವ ಶಕ್ತಿ. ಇಂಥ ಶಕ್ತಿಸ್ಫೋಟ ಪರಿಷತ್ತಿನ ಪುಸ್ತಕಗಳ ಮೂಲಕ ಆಗುತ್ತದೆನ್ನುವ ವಿಶ್ವಾಸ ನಮ್ಮದಾಗಿದೆ.

ದಿನಾಂಕ : ೧೬-೧-೨೦೦೯

ಡಾ. ನಲ್ಲೂರು ಪ್ರಸಾದ್. ಆರ್.ಕೆ.
ಅಧ್ಯಕ್ಷರು

ಶ್ರೀಃ



॥ ಶ್ರೀ ಗೋಪಾಲಕೃಷ್ಣಾಯ ನಮಃ ॥

ಕನಕದಾಸವಿರಚಿತ

# ಹರಿಭಕ್ತಿಸಾರ

ಶ್ರೀಯರಸ ಗಾಂಗೇಯನುತ ಕೌಂ
ತೇಯವಂದಿತಚರಣ ಕಮಲದ
ಳಾಯತಾಂಬಕರೂಪ ಚಿನ್ಮಯ ದೇವಕೀತನಯ
ರಾಯ ರಘುಕುಲವರ್ಯ ಭೂಸುರ
ಪ್ರೀಯ ಸುರಪುರನಿಲಯ ಚೆನ್ನಿಗ
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ॥

ಶ್ರೀಯರಸ ಗಾಂಗೇಯನುತ ಕೌಂ
ತೇಯವಂದಿತಚರಣಕಮಲದ
ಛಾಯತಾಂಬಕರೂಪ ಚಿನ್ಮಯ ದೇವಕೀತನಯ
ರಾಯ ರಘುಕುಲವರ್ಯ ಭೂಸುರ
ಪ್ರೀಯ ಸುರಪುರನಿಲಯ ಚೆನ್ನಿಗ
ರಾಯ ಚತುರೋಪಾಯ ರಕ್ಷಿಸು ನಮ್ಮನನರತ ೧

ದೇವದೇವ ಜಗದ್ಭರಿತ ವಸು
ದೇವಸುತ ಜಗದೇಕನಾಥ ರ
ಮಾವಿನೋದಿತ ಸಜ್ಜನಾನತ ನಿಖಿಲಗುಣಭರಿತ
ಭಾವಜಾರಿಪ್ರಿಯ ನಿರಾಮಯ
ರಾವಣಾಂತಕ ರಘುಕುಲಾನ್ವಯ
ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ ೨

ಅನುಪಮಿತಚಾರಿತ್ರ ಕರುಣಾ
ವನಧಿ ಭಕ್ತಕುಟುಂಬಿ ಯೋಗೀ
ಜನಹೃದಯಪರಿಪೂರ್ಣ ನಿತ್ಯಾನಂದ ನಿಗಮನುತ
ವನಜನಾಭ ಮುಕುಂದ ಮುರಮ
ರ್ದನ ಜನಾರ್ದನ ತ್ರೈಜಗತ್ಪಾ
ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ೩

ಕಮಲಸಂಭವವಿನುತ ವಾಸವ
ನಮಿತ ಮಂಗಳಚರಿತ ದುರಿತ
ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ
ಅಮಿತವಿಕ್ರಮ ಭೀಮ ಸೀತಾ
ರಮಣ ವಾಸುಕಿಶಯನ ಸೀತಾ
ರಮಣ ವಾಸುಕಿಶಯನ ಖಗಪತಿ
ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ೪

ಕ್ಷೀರವಾರಿಧಿಶಯನ ಶಾಂತಾ
ಕಾರ ವಿವಿಧವಿಚಾರ ಗೋಪೀ
ಜಾರ ನವನಿತಚೋರ ಚಕ್ರಾಧಾರ ಭವದೂರ
ಮಾರಪಿತ ಗುಣಹಾರ ಸರಸಾ
ಕಾರ ರಿಪುಸಂಹಾರ ತುಂಬುರು
ನಾರದಪ್ರಿಯ ವರದ ರಕ್ಷಿಸು ನಮ್ಮನನವರತ ೫

೧. ಲಕ್ಷ್ಮೀಪತಿ, ಭೀಷ್ಮಸ್ತುತ, ಪಾಂಡವವಂದಿತಚರಣ, ತಾವರೆಯ ದಳದಂತೆ ವಿಶಾಲವಾದ ಕಣ್ಣುಳ್ಳವನೆ, ಜ್ಞಾನಮೂರ್ತಿ, ದೇವಕೀಸುತ, ರಘುಕುಲದ ರಾಜಾಧಿರಾಜ ಶ್ರೀರಾಮಚಂದ್ರ, ಬ್ರಾಹ್ಮಣಪ್ರಿಯ, ಸುರಪುರ (ಬೇಲೂರು) ನಿವಾಸ, ಸುಂದರಾಗ-ಚೆನ್ನಕೇಶವ, ಜಾಣ್ಮೆಯ ಉಪಾಯಶೀಲ, ಸದಾ ನಮ್ಮನ್ನು ರಕ್ಷಿಸು.

ಟಿಪ್ಪಣಿ :- ಚತುರ ಉಪಾಯ-ಚತುರೋಪಾಯ; ಚತುರ್ ಉಪಾಯ-ಚತುರುಪಾಯ = ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳನ್ನು ಕೈಗೊಳ್ಳತಕ್ಕವನು.

೨. ದೇವತೆಗಳ ದೇವ, ಜಗದ್ವ್ಯಾಪಿ, ವಸುದೇವ ಪುತ್ರ, ಜಗತ್ತಿನ ಏಕೇಶ್ವರ, ಲಕ್ಷ್ಮಿಯೊಡನೆ ವಿನೋದಿಸತಕ್ಕವನೆ, ಸಾಧುವಂದಿತ, ಸಕಲ ಸದ್ಗುಣ ಪೂರ್ಣ, ಶಿವನ ಮಿತ್ರನೆ, ದುಃಖರಹಿತ, ರಾವಣಸಂಹಾರಿ, ರಘುವಂಶದ ಕುಲದೇವತೆಯೆ, ದಾನವ ವೈರಿಯೆ, ರಕ್ಷಿಸು ನಮ್ಮನನವರತ.

೩. ಎಣ್ಣೆಯಿಲ್ಲದ ದಿವ್ಯಚರಿತನೆ, ದಯಾಸಾಗರನೆ, ಭಕ್ತರನ್ನು ಕುಟುಂಬದವರೆಂದು ತಿಳಿದವನೆ, ಯೋಗಿಗಳ ಹೃದಯದಲ್ಲಿ ನೆಲೆಸಿದವನೆ, ಸರ್ವವ್ಯಾಪಿಯೆ, ನಿತ್ಯಾನಂದರೂಪನೆ, ವೇದಗಳಿಂದ ಹೊಗಳಲ್ಪಟ್ಟವನೆ, ಪದ್ಮನಾಭನೆ, ಮುಕುಂದ, ಮುರಮರ್ದನ, ಜನಾರ್ದನ, ಮೂರುಲೋಕಗಳಲ್ಲಿಯೂ ಪಾವನನಾದವನೆ, ದೇವಪೂಜಿತ, ರಕ್ಷಿಸು ನಮ್ಮನನವರತ.

೪. ಬ್ರಹ್ಮನಿಂದ ಸ್ತುತನಾದವನೆ, ಇಂದ್ರನಿಂದ ನಮಸ್ಕೃತನೆ, ಮಂಗಳಚರಿತನೆ, (ಭಕ್ತರ) ಪಾಪವನ್ನು ಮನ್ನಿಸುವವನೆ, ರಾಘವ, ಜಗತ್ಪೂಜಿತ, ಜಗದ್ರೂಪಿ, ಜಗನ್ಮಯ, ಎಣೆಯಿಲ್ಲದ ಪರಾಕ್ರಮಶಾಲಿಯೆ, ದುಷ್ಟಭಯಂಕರ, ಸೀತಾಪತಿ, ಶೇಷಶಯನ, ಗರುಡಗಮನ, ಮನ್ಮಥನ ತಂದೆಯೆ, ರಕ್ಷಿಸು ನಮ್ಮನನವರತ.

೫. ಕ್ಷೀರಸಾಗರಶಯನ, ಶಾಂತಮೂರ್ತಿ, ಸಕಲವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ಸಂಚರಿಸುವವನೆ, ಗೋಪೀರಮಣ, ಲೀಲೆಗಾಗಿ ಬೆಣ್ಣೆಯನ್ನು ಕದ್ದವನೆ, ಪ್ರಾಣಿಸಮೂಹದ ಆಧಾರ, ಜನನರಹಿತ, ಮನ್ಮಥಜನಕ, ಗುಣಶಾಲಿ, ಸುಂದರಾಕಾರ, ರಿಪುಸಂಹಾರಿ, ತುಂಬುರ ನಾರದಪ್ರಿಯ, ವರದ, ರಕ್ಷಿಸು ನಮ್ಮನನವರತ.

ಟಿಪ್ಪಣಿ :- ಭವದೂರ-ಜನನರಹಿತ; ಸಂಸಾರಕಷ್ಟದ ಪರಿಹಾರಕ.

ತಾಮರಸದಳನಯನ ಭಾರ್ಗವ
ರಾಮ ಹಲಧರರಾಮ ದಶರಥ
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ
ಸಾಮಗಾನಪ್ರೇಮ ಕಾಂಚನ
ದಾಮಧರ ಸುತ್ರಾಮವಿನಮಿತ
ನಾಮ ರವಿಕುಲಸೋಮ ರಕ್ಷಿಸು ನಮ್ಮನನವರತ ೬

ವೇದಗೋಚರ ವೇಣುನಾದವಿ
ನೋದ ಮಂದರಶೈಲಧರ ಮಧು
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ
ಯಾದವೇಂದ್ರ ಯಶೋದೆನಂದನ
ನಾದಬಿಂದುಕಳಾತಿಶಯ ಪ್ರ
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ೭

ಅಕ್ಷಯಾಶ್ರಿತಸುಜನಜನಸಂ
ರಕ್ಷಣ ಶ್ರೀವತ್ಸಕೌಸ್ತುಭ
ಮೋಕ್ಷದಾಯಕ ಕುಟಿಲದಾನವಶಿಕ್ಷ ಕುಮುದಾಕ್ಷ
ಪಕ್ಷಿವಾಹನ ದೇವಸಂಕುಲ
ಪಕ್ಷ ನಿಗಮಾಧ್ಯಕ್ಷ ವರನಿಟಿ
ಲಾಕ್ಷಸಖ ಸರ್ವೇಶ ರಕ್ಷಿಸು ನಮ್ಮನನವರತ ೮

ಚಿತ್ರಕೂಟನಿವಾಸ ವಿಶ್ವಾ
ಮಿತ್ರಕ್ರತುಸಂರಕ್ಷ ರವಿಶಶಿ
ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ
ಧಾತ್ರಿಜಾಂತಕ ಕಪಟನಾಟಕ
ಸೂತ್ರ ಪರಮಪವಿತ್ರ ಫಲ್ಗುನ
ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ೯

ಮಂಗಳಾತ್ಮಕ ದುರಿತತಿಮಿರಪ
ತಂಗ ಗರುಡತುರಂಗ ರಿಪುಮದ
ಭಂಗ ಕೀರ್ತಿತರಂಗ ಪುರಹರಸಂಗ ನೀಲಾಂಗ
ಅಂಗದಪ್ರಿಯನಂಗಪಿತ ಕಾ
ಳಿಂಗಮರ್ದನ ಅಮಿತಕರುಣಾ
ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ೧೦

೬. ಕಮಲದಳನಯನ, ಪರಶುರಾಮ, ಬಲರಾಮ, ರಘುರಾಮ, ಮೇಘಶ್ಯಾಮ, ಸದ್ಗುಣಗಳ ನಿಧಿಯೆ, ಅವಧಿರಹಿತನೆ, ಸಾಮಗಾನಪ್ರಿಯ, ಚಿನ್ನದಹಾರವನ್ನು ಧರಿಸಿದವನೆ, ದೇವೇಂದ್ರನಿಂದ ಸ್ತುತಿಸಲ್ಪಟ್ಟ ನಾಮವುಳ್ಳವನೆ, ಸೂರ್ಯವಂಶದಲ್ಲಿ ಅವತರಿಸಿದ ರಾಮಚಂದ್ರ, ರಕ್ಷಿಸು ನಮ್ಮನನವರತ.

೭. ವೇದಗೋಚರ, ಕೊಳಲಿನ ನಾದವಿನೋದಿ, ಮಂದರಗಿರಿಧಾರಿ, ಮಧುಸೂದನ, ಅಚ್ಯುತ, ಕಂಸಾರಿ, ಮಹಾಮಹಿಮ, ಯಾದವೇಂದ್ರ, ಯಶೋದಾನಂದನ, ನಾದಬಿಂದುಕಲಾತೀತ, ಪ್ರಹ್ಲಾದರಕ್ಷಕ, ರಕ್ಷಿಸು ನಮ್ಮನನವರತ.

ಟಿಪ್ಪಣಿ :- ನಾದ, ಬಿಂದು, ಕಲಾ-ಇವು ಆಗಮಶಾಸ್ತ್ರದಲ್ಲಿ ಪ್ರಸಿದ್ಧವಾದ ತತ್ತ್ವಗಳು. ಭಗವಂತನು ಇವುಗಳಿಗೆ ಅತೀತನಾದವನು.

೮. ಶಾಶ್ವತನೆ, ಆಶ್ರಯಿಸಿದ ಸುಜನರನ್ನು ರಕ್ಷಿಸುವವನೆ, ಶ್ರೀವತ್ಸ ಕೌಸ್ತುಭಧಾರಿಯೆ, ಮೋಕ್ಷದಾಯಕನೆ, ಕಪಟಿಗಳಾದ ದಾನವರನ್ನು ದಂಡಿಸುವವನೆ, ನೈದಿಲೆಯಂತೆ ಕಣ್ಣುಳ್ಳವನೆ, ಗರುಡವಾಹನ, ದೇವತೆಗಳ ಪಕ್ಷವನ್ನು ವಹಿಸಿದವನೆ, ಜಗದೀಶ್ವರ, ಈಶ್ವರಮಿತ್ರ, ಸರ್ವೇಶ್ವರ, ರಕ್ಷಿಸು ನಮ್ಮನನವರತ.

ಟಿಪ್ಪಣಿ :- ಶ್ರೀವತ್ಸ-ವಿಷ್ಣುವಿನ ಎದೆಯಲ್ಲಿರುವ ಒಂದು ಚಿಹ್ನೆ. 'ಸಂರಕ್ಷಸಶ್ರೀವತ್ಸಕೌಸ್ತುಭ' ಎಂಬ ಪಾಠವಿದ್ದರೆ ಉತ್ತಮ.

೯. ಚಿತ್ರಕೂಟ ನಿವಾಸಿ, ವಿಶ್ವಾಮಿತ್ರರ ಯಜ್ಞದ ರಕ್ಷಕ, ಸೂರ್ಯಚಂದ್ರರೇ ನಿನ್ನ ಕಣ್ಣುಗಳು, ಮಂಗಳ ಚರಿತ್ರ, ಸದ್ಗುಣಶಾಲಿ, ಸತ್ಪುರುಷ, ನರಕಾಸುರಸಂಹಾರಿ, ಕಪಟನಾಟಕಸೂತ್ರಧಾರ, ಅತ್ಯಂತಪಾವನ, ಅರ್ಜುನಮಿತ್ರ, ಪರಿಪರಿಯ ವಚನಗಳಿಂದ ವರ್ಣಿಸಲ್ಪಟ್ಟವನೆ, ರಕ್ಷಿಸು ನಮ್ಮನನವರತ.

೧೦. ಮಂಗಳಮೂರ್ತಿ, ಪಾಪವೆಂಬ ಕತ್ತಲೆಗೆ ಸೂರ್ಯನಾದವನೆ, ಗರುಡವಾಹನ, ಶತ್ರುಮರ್ದನ, ಕೀರ್ತಿಶಾಲಿ, ಶಂಕರಮಿತ್ರ, ನೀಲವರ್ಣ, ಅಂಗದನ ಪ್ರಿಯನೆ, ಮನ್ಮಥಜನಕ, ಕಾಳಿಂಗಮರ್ದನ, ಎಣೆಯಿಲ್ಲದ ಕರುಣಾಶಾಲಿ, ನೃಸಿಂಹಾವತಾರಿ, ರಕ್ಷಿಸು ನಮ್ಮನನವರತ.

ದಾಶರಥಿ ವೈಕುಂಠನಗರನಿ
ವಾಸ ತ್ರೈಜಗದೀಶ ಪಾಪವಿ
ನಾಶ ಪರಮವಿಲಾಸ ಹರಿ ಸರ್ವೇಶ ದೇವೇಶ
ವಾಸುದೇವ ದಿನೇಶಶತಸಂ
ಕಾಶ ಯದುಕುಲವಂಶತಿಲಕ ಪ
ರಾಶರಾನತ ದೇವ ರಕ್ಷಿಸು ನಮ್ಮನನವರತ ೧೧

ಕುಂದಕುಟ್ಮಲರದನ ಪರಮಾ
ನಂದ ಹರಿ ಗೋವಿಂದ ಸನಕಸ
ನಂದವಂದಿತ ಸಿಂಧುಬಂಧನ ಮಂದರಾದ್ರಿಧರ
ಇಂದಿರಾಪತಿ ವಿಜಯಸಖ ಅರ
ವಿಂದನಾಭ ಪುರಂದರಾರ್ಚಿತ
ನಂದಕಂದ ಮುಕುಂದ ರಕ್ಷಿಸು ನಮ್ಮನನವರತ ೧೨

ಬಾಣಬಾಹುಚ್ಛೇದ ರಾವಣ
ಪ್ರಾಣನಾಶನ ಪುಣ್ಯನಾಮ ಪು
ರಾಣಪುರುಷೋತ್ತಮ ನಿಪುಣ ಅಣುರೇಣುಪರಿಪೂರ್ಣ
ಕ್ಷೋಣಿಪತಿ ಸುಲಲಿತ ಸುದರ್ಶನ
ಪಾಣಿ ಪಾಂಡವರಾಜಕಾರ್ಯಧು
ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ ೧೩

ನೀಲವರ್ಣ ವಿಶಾಲಶುಭಗುಣ
ಶೀಲ ಮುನಿಕುಲಪಾಲ ಲಕ್ಷ್ಮೀ
ಲೋಲ ರಿಪುಶಿಶುಪಾಲಮಸ್ತಕಶೂಲ ವನಮಾಲ
ಮೂಲಕಾರಣ ವಿಮಲ ಯಾದವ
ಜಾಲಹಿತ ಗೋಪಾಲ ಅಗಣಿತ
ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ ೧೪

ನಾಗನಗರಿಧರಿತ್ರಿ ಕೋಶವಿ
ಭಾಗ ತಂತ್ರನಿಯೋಗಗಮನ ಸ
ರಾಗಪಾಂಡವರಾಜಜಿತಸಂಗ್ರಾಮ ನಿಸ್ಸೀಮ
ಯೋಗಗಮ್ಯ ಭವಾಬ್ಧಿವಿಷಧರ
ನಾಗಗಾರುಡಮಂತ್ರವಿದ ಭವ
ರೋಗವೈದ್ಯ ವಿಚಿತ್ರ ರಕ್ಷಿಸು ನಮ್ಮನನವರತ ೧೫

೧೧. ದಶರಥತನಯ, ವೈಕುಂಠನಿವಾಸಿ, ಮೂರು ಲೋಕಗಳ ಒಡೆಯ, ಪಾಪವಿನಾಶಕ, ಪರಮಲೀಲಾವಿನೋದಿ, ಹರಿ, ಸರ್ವೇಶ್ವರ, ದೇವೇಶ್ವರ, ವಾಸುದೇವ, ನೂರು ಸೂರ್ಯರಂತೆ ಬೆಳಗುವವನೆ, ಯದುಕುಲೋತ್ತಮ, ಪರಾಶರ ಮುನಿವಂದಿತ, ರಕ್ಷಿಸು ನಮ್ಮನನವರತ.

೧೨. ಮಲ್ಲಿಗೆಯ ಮೊಗ್ಗಿನಂತೆ ಮನೋಹರವಾದ ಹಲ್ಲುಗಳಿಂದ ಶೋಭಿತನೆ, ಪರಮಾನಂದ ಸ್ವರೂಪನೆ, ಓ ಹರಿ, ಗೋವಿಂದ, ಸನಕಸನಂದನಾದಿವಂದಿತ, ಸಮುದ್ರಕ್ಕೆ ಸೇತುವನ್ನು ಕಟ್ಟಿದ ಮಹಾನುಭಾವ, ಮಂದರಗಿರಿಧಾರಿ, ಲಕ್ಷ್ಮೀರಮಣ, ಅರ್ಜುನಸಖನೆ, ಕಮಲನಾಭನೆ, ಇಂದ್ರಪೂಜಿತನೆ, ನಂದಕುಲದಲ್ಲಿ ಜನಿಸಿದ ಮುಕುಂದನೆ, ರಕ್ಷಿಸು ನಮ್ಮನನವರತ.

೧೩. ಬಾಣಾಸುರನ ಬಾಹುಗಳನ್ನು ಕಡಿದವನೆ, ರಾವಣಸಂಹಾರಿಯೆ, ಪುಣ್ಯನಾಮನೆ, ಪುರಾಣ ಪುರುಷೋತ್ತಮನೆ, ನಿಪುಣನೆ, ಅಣುರೇಣುಗಲಲ್ಲಿ ತುಂಬಿದವನೆ, ಪೃಥ್ವೀಪತಿಯೆ, ಸುಂದರಾಂಗನೆ, ಸುದರ್ಶನಚಕ್ರಪಾಣಿಯೆ, ಪಾಂಡವರ ರಾಜಕಾರ್ಯದಲ್ಲಿ ಧುರೀಣನೆ, ಜಗತ್ತನ್ನು ನಿರ್ಮಿಸಿದವನೆ, ರಕ್ಷಿಸು ನಮ್ಮನನವರತ.

೧೪. ನೀಲವರ್ಣನೆ, ಅನಂತ ಶುಭಗುಣಶೀಲನೆ, ಮುನಿಕುಲಪಾಲ, ಲಕ್ಷ್ಮೀಲೋಲ, ವೈರಿಯಾದಶಿಶುಪಾಲನ ಶಿರಸ್ಸಿಗೆ ಶೂಲನಾದವನೆ, ವನಮಾಲಾವಿರಾಜಿತ, ಜಗತ್ತಿನ ಮೂಲಕಾರಣ, ಪರಿಶುದ್ಧಾತ್ಮ ಯಾದವಹಿತಕಾರಿ, ಗೋಪಾಲ, ಅನಂತಲೀಲ, ಕೋಮಲಾಂಗ, ರಕ್ಷಿಸು ನಮ್ಮನನವರತ.

೧೫. ಹಸ್ತಿನಾವತಿಯ ರಾಜ್ಯಕೋಶಗಳನ್ನು ವಿಭಾಗಿಸಿ ಪಾಂಡವರಿಗೆ ಕೊಡಿಸುವುದಕ್ಕಾಗಿ ರಾಯಭಾರಿಯಾಗಿ ಹೋದವನೆ, ಭಕ್ತನಾದ ಧರ್ಮರಾಜನು ಗೆದ್ದ ಭಾರತ ಯುದ್ಧದಲ್ಲಿ ಮುಖ್ಯಪಾತ್ರವನ್ನು ಧರಿಸಿದವನೆ, ಯೋಗಮಾರ್ಗದಿಂದ ತಿಳಿಯಲ್ಪಡತಕ್ಕವನೆ, ಸಂಸಾರಸಮುದ್ರದಲ್ಲಿರುವ ವಿಷಸರ್ಪಗಳನ್ನು ಪರಿಹರಿಸಬಲ್ಲ ಗಾರುಡಮಂತ್ರವನ್ನು ಬಲ್ಲವನೆ, ಸಂಸಾರವೆಂಬ ರೋಗಕ್ಕೆ ವೈದ್ಯನೆ, ವಿಚಿತ್ರಚರಿತ್ರನೆ, ರಕ್ಷಿಸು ನಮ್ಮನನವರತ.

ಶ್ರೀಮದುತ್ಸಹ ದೇವನುತ ಶ್ರೀ
ರಾಮ ನಿನ್ನಯ ಚರಣಸೇವಕ
ಪ್ರೇಮದಿಂ ಸಾಷ್ಟಾಂಗವೆರಗಿಯೆ ಮಾಳ್ಪೆ ಬಿನ್ನಪವ
ಮಹಿಯೊಳೀವರೆಗೆ ನಾವು ಸು
ಕ್ಷೇಮಿಗಳು ನಿನ್ನಯ ಪದಾಬ್ಜ
ಕ್ಷೇಮವಾರ್ತೆಯನರುಹಿ ರಕ್ಷಿಸು ನಮ್ಮನನವರತ ೧೬

ಈಗಲೀ ಮರ್ಯಾದೆಯಲಿ ಶರ
ಣಾಗತರ ಸೇವೆಯೊಳು ಹೊಂಪುಳಿ
ಯಾಗಿ ಬಾಳುವರೇನು ಧನ್ಯರೊ ಹರ ಮಹಾದೇವ
ಭೋಗಭಾಗ್ಯವ ಬಯಸಿ ಮುಕ್ತಿಯ
ನೀಗಿ ನಿಮ್ಮನು ಭಜಿಸಲರಿಯದ
ರಾಗಿಗಳ ಮಾತೇನು ರಕ್ಷಿಸು ನಮ್ಮನನವರತ ೧೭

ಭಕ್ತಿಸಾರದ ಚರಿತೆಯನು ಹರಿ
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು
ಮುಕ್ತಿಗಿದು ನೆಲೆದೋರುವುದು ಹರಿ
ಭಕ್ತರಿದ ಲಾಲಿಪುದು ನಿಜಮತಿ
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ೧೮

ನಳಿನಲೋಚನ ನಿನ್ನ ಮೂರ್ತಿಯ
ಕಳೆ ಬೆಳಗುತಿದೆ ಲಹರಿಯಲಿ ಭೂ
ತಳದೊಳಚ್ಚರಿಯಾದ ನಾಮಾಮೃತಸಮುದ್ರದಲಿ
ಬಳಸುವರು ಸತ್ಕವಿಗಳವರ
ಗ್ಗಳಿಕೆಯೆನಗಿನಿತಿಲ್ಲ ಸನ್ಮತಿ
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ೧೯

ಗಿಳಿಯ ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದು ನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ
ತಿಳುಹು ಮತಿಯನು ಎನ್ನ ಜಿಹ್ವೆಗೆ
ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ೨೦

೧೬. ಉತ್ಸಾಹಪೂರ್ಣರಾದ ದೇವತೆಗಳಿಂದ ಸ್ತುತಿಸಲ್ಪಟ್ಟವನೆ, ಶ್ರೀರಾಮ, ನಿನ್ನ ಚರಣಸೇವಕನಾದ ನಾನು ಭಕ್ತಿಯಿಂದ ಸಾಷ್ಟಾಂಗವೆರಗಿ ಬಿನ್ನೈಸಿಕೊಳ್ಳುತ್ತೇನೆ. ಈ ಲೋಕದಲ್ಲಿ ನಾವು ಇದುವರೆಗೆ ಕ್ಷೇಮದಿಂದ ಇದ್ದೇವೆ! ನಿನ್ನ ಪಾದಕಮಲಗಳ ಕುಶಲವಾರ್ತೆಯನ್ನು ಅರುಹಿ ರಕ್ಷಿಸು ನಮ್ಮನನವರತ.

೧೭. ಈ ಪ್ರಕಾರವಾಗಿ ನಿನ್ನ ಭಕ್ತರ ಸೇವೆಯಲ್ಲಿಯೇ ರೋಮಾಂಚಗೊಂಡು ತಲ್ಲೀನರಾಗಿ ಬಾಳತಕ್ಕವರು, ಹರ ಹರ ಮಹಾದೇವ, ಏನು ಧನ್ಯರೋ! ನಿನ್ನನ್ನು ಭಜಿಸುವ ದಾರಿ ಯಾವುದೆಂದರಿಯದೆ, ಮುಕ್ತಿಯನ್ನು ಬಯಸದೆ, ನಾನಾ ಬಗೆಯ ಭೋಗಭಾಗ್ಯಗಳಿಗಾಗಿ ನಿನ್ನನ್ನು ಸೇವಿಸುವ ಲಂಪಟರನ್ನು ಕಟ್ಟಿಕೊಂಡು ನಮಗೇನು?

೧೮. ಹರಿಭಕ್ತರು ಆಲಿಸೆಂದು ಭಕ್ತಿಸಾರದ ಚರಿತ್ರೆಯನ್ನು ರಚಿಸಲು ತೊಡಗಿದ್ದೇನೆ. ಇದನ್ನು ಆಸಕ್ತಿಯಿಂದ ಬರೆಯುವವರ ಮತ್ತು ಓದುವವರ ಇಷ್ಟಾರ್ಥವು ಸಿದ್ಧಿಸುತ್ತದೆ. ಮುಕ್ತಿಯ ದಾರಿಯನ್ನು ಇದು ತೋರಿಸುವುದು. ಹರಿಭಕ್ತರು ಪ್ರೀತಿಯಿಂದ ಇದನ್ನು ಕೇಳಬೇಕು. ಹೇ ಸ್ವಾಮಿ, ನಮ್ಮ ಬುದ್ಧಿಯು ಭಕ್ತಿಯ ಕಡೆಗೆ ಒಲಿಯುವಂತೆ ರಕ್ಷಿಸು ನಮ್ಮನನವರತ.

೧೯. ಹೇ ನಳಿನಲೋಚನ, ನಿನ್ನ ನಾಮಾವಳಿಯೆಂಬ ಆಶ್ಚರ್ಯಕರವಾದ ಕ್ಷೀರಸಮುದ್ರದಲ್ಲಿ ನಿನ್ನ ಮೂರ್ತಿಯ ಸೌಂದರ್ಯವು ಅಲೆಯಲೆಯಾಗಿ ಮೇಲೆದ್ದು ಬೆಳಗುತ್ತಿದೆ. ಉತ್ತಮರಾದ ಕವಿಗಳು ಈ ಸೌಂದರ್ಯವನ್ನು ವರ್ಣಿಸುತ್ತಾರೆ. ನನಗೆ ಅಂತಹ ಅಗ್ಗಳಿಕೆ ಇಲ್ಲ. ನನ್ನ ಬುದ್ಧಿಗೆ ಮಂಗಳವನ್ನಿತ್ತು ಸಲಹು.

೨೦. ಜಾಣರು ಗಿಳಿಯ ಮರಿಯನ್ನು ತಂದು ಪಂಜರದೊಳಗಿಟ್ಟು ಪೋಷಿಸಿ ಮುದ್ದು ಮಾತುಗಳನ್ನು ಕಲಿಸುತ್ತಾರೆ. ಆ ಮೇಲೆ ಗಿಳಿಯು ಆಡುವ ಮುದ್ದು ಮಾತುಗಳನ್ನು ಕೇಳಿ ಆನಂದಿಸುತ್ತಾರೆ. ಹಾಗೆ, ಹೇ ಸ್ವಾಮಿಯೇ ನನಗೆ ಬುದ್ಧಿಯನ್ನಿತ್ತು ನಿನ್ನ ನಾಮಾವಳಿಯು ನನ್ನ ನಾಲಿಗೆಯಲ್ಲಿ ಸದಾ ಮೊಳಗುವಂತೆ ಮಾಡು.(ನನ್ನ ತೊದಲು ಮಾತನ್ನು ಕೇಳಿ ಸಂತೋಷಿಸು.)

ಪೊಗಳಲಳವೇ ನಿನ್ನ ನಾಮವ
ಸುಗುಣ ಸಚ್ಚಾರಿತ್ರಕಥನವ
ನಗಣಿತೋಪಮ ಅಮಿತವಿಕ್ರಮಗಮ್ಯ ನೀನೆಂದು
ನಿಗಮತತಿ ಕೈವಾರಿಸುತ ಪದ
ಯುಗವ ಕಾಣದೆ ಬಳಲುತಿದೆ ವಾ
ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ೨೧

ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ
ಆದಿಮೂರುತಿ ನೀನು ನೆರೆ ಕರು
ಣೋದಯನು ಹೃದಯಾಂಗಣದಿ ಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ೨೨

ಹಸಿವರಿತು ತಾಯ್ ತನ್ನ ಶಿಶುವಿಗೆ
ಒಸೆದು ಮೊಲೆ ಕೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು
ಬಸಿರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸಿರುತಿವೆ ವೇದಗಳು ರಕ್ಷಿಸು ನಮ್ಮನನವರತ ೨೩

ಇಬ್ಬರಗುಣಗರು ನಿನಗೆಯವರೊಳ
ಗೊಬ್ಬ ಮಗನೀರೇಳು ಲೋಕದ
ಹೆಬ್ಬೆಳಸು ಬೆಳೆವಂತೆ ಕಾರಣಕರ್ತನಾದವನು
ಒಬ್ಬ ಮಗನದ ಬರೆವ ಕರಣಿಕ
ರಿಬ್ಬರೇ ಲೋಕಪ್ರಸಿದ್ಧರು
ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ ೨೪

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯ ಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು
ನಿರತ ಮಾಯೆಯು ದಾಸಿ ನಿಜ ಮಂ
ದಿರವಜಾಂಡವು ಜಂಗಮಸ್ಥಾ
ವರಕುಟುಂಬಿಗ ನೀನು ರಕ್ಷಿಸು ನಮ್ಮನನವರತ ೨೫

೨೧. ನಿನ್ನ ನಾಮಾವಳಿಯನ್ನು ಹೇಳಿ ಹೊಗಳಲು ಯಾರಿಗೆ ಸಾಧ್ಯವಾದೀತು? ನಿನ್ನ ಗುಣಗಳನ್ನೂ ಚರಿತೆಗಳನ್ನೂ ವರ್ಣಿಸಲಾದೀತೆ? "ನಿನಗೆ ಹೋಲಿಕೆಯನ್ನೀಯಲು ಒಂದು ಉಪಮಾನವೂ ಇಲ್ಲ. ಅಸಾಧಾರಣ ಯೋಗಿಗಳಿಗೆ ಮಾತ್ರವೇ ಗೋಚರಿಸತಕ್ಕವನು" ಎಂಬುದಾಗಿ ವೇದಗಳು ನಿನ್ನನ್ನು ಹೊಗಳುತ್ತಿವೆ. ನಿನ್ನ ಪದಯುಗವನ್ನು ವರ್ಣಿಸಲಾರದೆ ಬಳಲುತ್ತಿವೆ. ಹೇ ವಾಸುಕಿಶಯನ, ಸರ್ವೇಶ್ವರ, ರಕ್ಷಿಸು ನಮ್ಮನನವರತ.

೨೨. ವೇದಶಾಸ್ತ್ರಗಳನ್ನು ನಾನರಿಯೆ, ಪುರಾಣವು ಗೊತ್ತಿಲ್ಲ. ಪುಣ್ಯದ ಮತ್ತೊಂದು ಹಾದಿಯು ನನಗೆ ತಿಳಿಯದು. ತರ್ಕದ ವಾದವನ್ನು ಕಲಿಸುವ ಗುರುಹಿರಿಯರನ್ನೇ ನಾನು ಕಂಡವನಲ್ಲ! ನಾನೊಬ್ಬ ಮೂಢಾತ್ಮ. ಹೇ ಕರುಣಾಳು, ಆದಿಮೂರ್ತಿಯೆ, ನನ್ನ ಹೃದಯದಲ್ಲಿ ಜ್ಞಾನವು ಉದಿಸುವಂತೆ ಮಾಡಿ ಸಲಹು.

೨೩. ತಾಯಿ ತನ್ನ ಮಗುವಿಗೆ ಹಸಿವಾಗಿದೆಯೆಂದರಿತು ತಾನಾಗಿ ಮೊಲೆ ಹಾಲನ್ನಿತ್ತು ಪೊರೆಯುತ್ತಾಳಲ್ಲವೆ? ಹಾಗೆ ನೀನು ನನ್ನನ್ನು ಸಲಹಬೇಕಲ್ಲದೆ ನನಗೆ ಪೋಷಕರು ಇನ್ನು ಯಾರಿದ್ದಾರೆ? "ನಿನ್ನ ಹೊಟ್ಟೆಯಲ್ಲಿ ಕೋಟಿ ಬ್ರಹ್ಮಾಂಡಗಳನ್ನಿರಿಸಿ ಪಾಲಿಸುವ ಪರಮಾತ್ಮ ನೀನು" ಎಂದು ವೇದಗಳು ಘೋಷಿಸುತ್ತವೆ. ಸ್ವಾಮಿ, ನನ್ನನ್ನು ಸಲಹು.

೨೪. ನಿನಗೆ ಇಬ್ಬರು ಮಕ್ಕಳು. ಅವರಲ್ಲೊಬ್ಬನು ಹದಿನಾಲ್ಕು ಲೋಕಗಳನ್ನು ಸೃಷ್ಟಿಸಿ ಬೆಳೆಸಿದನು. ಇನ್ನೊಬ್ಬನು ಅದನ್ನು ಬರೆಯುತ್ತ ಹೋಗುವ ಕರಣಿಕನು! ಹೀಗೆ ಇಬ್ಬರೂ ಪ್ರಸಿದ್ಧರಾದರು. ಈ ಪ್ರಾಣಿಗಳೆಲ್ಲವನ್ನೂ ಈ ರೀತಿಯಲ್ಲಿ ನೀನೇ ಹಬ್ಬಿಸಿದ್ದೀಯೆ.

ಟಿಪ್ಪಣಿ:- ಇಬ್ಬರು ಮಕ್ಕಳು-ಬ್ರಹ್ಮ ಮತ್ತು ಮನ್ಮಥ. ಮನ್ಮಥನೇ ಕಾಮ. ಕಾಮದಿಂದ ಪ್ರಾಣಿಸಂತತಿ ಬೆಳೆಯುತ್ತಿದೆ.

೨೫. ಲಕ್ಷ್ಮೀದೇವಿ ನಿನ್ನ ಮಡದಿ. ಬ್ರಹ್ಮನು ಮಗ. ಸರಸ್ವತಿಯು ಹಿರಿಯ ಸೊಸೆ. ಪಾರ್ವತಿಯು ಸಹೋದರಿ. ಪರಮೇಶ್ವರನು ಮೈದುನ. ಎಲ್ಲ ದೇವತೆಗಳೂ ನಿನ್ನ ಸೇವಕರು. ಮಾಯೆಯು ಸದಾ ನಿನ್ನ ದಾಸಿ. ವಿಶ್ವವೇ ನಿನ್ನ ಮನೆ. ಸ್ಥಾವರ ಜಂಗಮಗಳೆಲ್ಲವೂ ನಿನ್ನ ಕುಟುಂಬಕ್ಕೆ ಸೇರಿದುವು.

ಸಾಗರನ ಮಗಳರಿಯದಂತೆ ಸ
ರಾಗದಲಿ ಸಂಚರಿಸುತಿಹ ವು
ದ್ಯೋಗವೇನು ನಿಮಿತ್ತ ಕಾರಣವಿಲ್ಲ ಲೋಕದಲಿ
ಭಾಗವತರಾದವರ ಸಲಹುವ
ನಾಗಿ ಸಂಚರಿಸುವುದು ಈ ಭವ
ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ೨೬

ಹಸ್ತಿವಾಹನನಾದಿಯಾದ ಸ
ಮಸ್ತ ದೇವನಿಕಾಯದೊಳಗೆ ಪ್ರ
ಶಸ್ತನಾವನು ನಿನ್ನವೋಲ್ ಶರಣಾಗತರ ಪೊರೆವ
ಹಸ್ತಕಲಿತಸುದರ್ಶನದೊಳರಿ
ಮಸ್ತಕವನಿಳುಹುವ ಪರಾತ್ಪರ
ವಸ್ತುವಲ್ಲವೆ ನೀನು ರಕ್ಷಿಸು ನಮ್ಮನನವರತ ೨೭

ಹಗೆಯರಿಗೆ ವರನೀವರಿಬ್ಬರು
ತೆಗೆಯಲರಿಯರು ಕೊಟ್ಟ ವರಗಳ
ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ
ಸುಗುಣರಿನ್ನಾರುಂಟು ಕದನವ
ಬಗೆದು ನಿನ್ನೊಳು ಜಯಿಸುವವರೀ
ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ೨೮

ಸುಮನಸರ ವೈರದಲಿ ಕೆಲಬರು
ಕುಮತಿಗಳು ತಪದಿಂದ ಭರ್ಗನ
ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು
ಸಮರಮುಖದೊಳಗುಪಮೆಯಲಿ ವಿ
ಕ್ರಮದಿ ವೈರವ ಮಾಡಿದವರಿಗೆ
ಅಮರಪದವಿಯನಿತ್ತೆ ರಕ್ಷಿಸು ನಮ್ಮನನವರತ ೨೯

ಬಲಿಯ ಬಂಧಿಸಿ ಮೊರೆಯಿಡುವ ಸತಿ
ಗೊಲಿದು ಅಕ್ಷಯವಿತ್ತು ಕರುಣದಿ
ಮೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ
ಶಿಲೆಯ ಸತಿಯಳ ಮಾಡಿ ತ್ರಿಪುರದ
ಲಲನೆಯರ ವತ್ರಗೆಡಿಸಿ ಕೂಡಿದ
ಕೆಲಸವುತ್ತಮವಾಯ್ತು ರಕ್ಷಿಸು ನಮ್ಮನನವರತ ೩೦

೨೬. ಮಡದಿಯಾದ ಲಕ್ಷ್ಮೀದೇವಿಗೂ ತಿಳಿಯದಂತೆ ಎಲ್ಲೆಲ್ಲಿಯೂ ಲೀಲೆಯಿಂದ ಸಂಚರಿಸುವೆಯಲ್ಲ, ಇದಕ್ಕೆ ನಿಮಿತ್ತವೇನು? ಓಹೊ! ತಿಳಿಯಿತು ನಿನ್ನ ಭಕ್ತರನ್ನು ಸಲಹುವುದಕ್ಕಾಗಿ ಸಂಚರಿಸುತ್ತೀಯೆ. ಹಾಗಾದ ಮೇಲೆ ಭಕ್ತನಾದ ನನ್ನನ್ನು ಭವಸಾಗರದಲ್ಲಿ ಮುಳುಗಿಸದಂತೆ ಸಲಹು!

೨೭. ಇಂದ್ರನೇ ಮೊದಲಾದ ಸಕಲ ದೇವತೆಗಳ ಮಧ್ಯದಲ್ಲಿ ಶರಣಾಗತರನ್ನು ತಪ್ಪದೆ ಸಲಹಬಲ್ಲ ನಿನ್ನಂತಹ ಶ್ರೇಷ್ಠನು ಇನ್ನು ಯಾವನಿದ್ದಾನೆ? ಕೈಯಲ್ಲಿ ಸುದರ್ಶನ ಚಕ್ರವನ್ನು ಹಿಡಿದು ವೈರಿಗಳ ತಲೆಯನ್ನು ಚೆಂಡಾಡಬಲ್ಲ ಪರಾತ್ಪರ ವಸ್ತುವಲ್ಲವೆ ನೀನು?

೨೮. ಬ್ರಹ್ಮ, ಈಶ್ವರ-ಇವರಿಬ್ಬರು ಹಗೆಗಳಾದ ರಾಕ್ಷಸರಿಗೆ, ಅವರು ಕೇಳಿದ ವರಗಳನ್ನು ಕೊಟ್ಟುಬಿಡುತ್ತಾರೆ. ವರದಿಂದ ಲೋಕಕ್ಕೆ ತೊಂದರೆಯಾದಾಗ ಅದನ್ನು ತಪ್ಪಿಸಲು ಅವರಿಂದಾಗದು? ಆಗ ನೀನೇ ಬಂದು ಲೋಕವನ್ನು ಸಂರಕ್ಷಿಸಬೇಕು. ಇಂತಹ ಸುಗುಣಶಾಲಿಯಾದವನು ಇನ್ನು ಯಾರಿದ್ದಾರೆ? ನಿನ್ನನ್ನೆದುರಿಸಿ ಗೆಲ್ಲತಕ್ಕವರು ಈ ಜಗತ್ತಿನಲ್ಲಿದ್ದಾರೆಯೆ? ಸ್ವಾಮಿ, ರಕ್ಷಿಸು ನಮ್ಮನನವರತ.

೨೯. ಕೆಲವು ಮಂದಿ ದುಷ್ಟರು ದೇವತೆಗಳೊಡನೆ ವೈರವನ್ನು ಬೆಳೆಸಿ, ಶಿವನನ್ನೂ, ಬ್ರಹ್ಮನನ್ನೂ ತಪಸ್ಸಿನಿಂದ ಮೆಚ್ಚಿಸಿ ವರವನ್ನು ಪಡೆದಿದ್ದಾರೆ. ನೀನು ಆ ದುಷ್ಟರನ್ನು ರಣರಂಗದಲ್ಲಿ ವಧಿಸಿ ದೇವಪದವಿಯನ್ನು ನೀಡಿದ್ದೀಯೆ.

ಟಿಪ್ಪಣಿ:- ಈ ಪದ್ಯವು ಹಿಂದಿನ ಪದ್ಯದ ವಿವರಣೆಯೆಂದು ತೋರುತ್ತದೆ. ಕೆಲವು ಪ್ರತಿಗಳಲ್ಲಿ ಈ ಪದ್ಯವಿಲ್ಲ.

೩೦. ಬಲಿಚಕ್ರವರ್ತಿಯನ್ನು ಬಂಧಿಸಿದ್ದೀಯೆ. ಮೊರೆಯಿಡುತ್ತಿದ್ದ ಪತಿವ್ರತೆಯಾದ ದ್ರೌಪದಿಯ ಸೀರೆಯು ಅಕ್ಷಯವಾಗುವಂತೆ ಕರುಣಿಸಿದ್ದೀಯೆ. ಮೊಲೆಯಣಿಸಿದ ಪೂತನಿಯ ಪ್ರಾಣವನ್ನು ನೀಗಿಸಿದ್ದೀಯೆ. ಶಿಲೆಯ ರೂಪದಲ್ಲಿದ್ದ ಅಹಲ್ಯೆಯನ್ನು ಉದ್ಧರಿಸಿ ಪವಿತ್ರಳನ್ನಾಗಿ ಮಾಡಿದ್ದೀಯೆ. ತ್ರಿಪುರಾಸುರರ ಪತ್ನಿಯರ ವ್ರತಭಂಗವನ್ನು ಮಾಡಿ ಅಸುರರ ಸಂಹಾರವನ್ನು ಮಾಡಿಸಿದ್ದೀಯೆ. ಇವೆಲ್ಲವೂ ಲೋಕಹಿತಕ್ಕಾಗಿ ಮಾಡಿದ ಉತ್ತಮಕಾರ್ಯಗಳು.

ಕರಿಯ ಕಾಯ್ದಾ ಜಲದಿ ಮಕರವ
ತರಿದು ಹಿರಣ್ಯಾಕ್ಷಕನ ಸೀಳ್ದಾ
ತರಳನನು ತಲೆಗಾಯ್ದು ಶಕಟಾಸುರನ ಹತಮಾಡಿ
ದುರುಳ ಕಂಸನ ಕೊಂದು ಮಗಧನ
ಮುರಿದು ವತ್ಸನ ಹಮ್ಮಳಿಸಿ ಖರ
ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ೩೧

ಶಿಶುತನದ ಸಾಮರ್ಥ್ಯದಲಿ ಕೆಲ
ರಸುರರನು ಸಂಹರಿಸಿ ಚಕ್ರವ
ಬಿಸುಟು ಯೌವನಕಾಲದಲಿಯಾ ಪಾಂಡುಸುತರಿಂದ
ವಸುಮತಿಯ ಭಾರವನಿಳುಹಿ ಸಾ
ಹಸದಿ ಮೆರೆದವನಾಗಿ ನೀ ಮೆ
ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ೩೨

ಎಲ್ಲರಲಿ ನೀನಾಗಿ ಸುಮನಸ
ರಲ್ಲಿಯತಿಹಿತನಾಗಿ ಯಾದವ
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ
ಕೊಲ್ಲಿಸಿದೆ ಭೀಮಾರ್ಜುನರ ಕೈ
ಯಲ್ಲಿ ಕೌರವಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ ೩೩

ನರಗೆ ಸಾರಥಿಯಾಗಿ ರಣದೊಳು
ತುರಗ ನೀರಡಿಸಿದರೆ ವಾರಿಯ
ಸರಸಿಯನು ನಿರ್ಮಿಸಿ ಕಿರೀಟಿಯ ಕೈಲಿ ಸೈಂಧವನ
ಶಿರವ ಕೆಡಹಿಸಿ ಅವನ ತಂದೆಯ
ಕರತಳಕೆ ನೀಡಿಸಿದೆ ಹರ ಹರ
ಪರಮ ಸಾಹಿಸಿ ನೀನು ರಕ್ಷಿಸು ನಮ್ಮನನವರತ ೩೪

ಬವರದಲಿ ಖತಿಗೊಂಡು ಗದೆಯೊಳು
ಕವಿದು ನಿನ್ನ ಶ್ರುತಾಯುಧನು ಹೊ
ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ
ವಿವರವೇನೋ ತಿಳಿಯೆನೀ ಮಾ
ಯವನು ನೀನೇ ಬಲ್ಲೆ ನಿನ್ನಾ
ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ೩೫

೩೧. ಮೊಸಳೆಯನ್ನು ಕೊಂದು ಗಜೇಂದ್ರನನ್ನು ಸಲಹಿದ್ದೀಯೆ. ಹಿರಣ್ಯಾಕ್ಷನನ್ನು ಸೀಳಿ ಬಾಲಕನಾದ ಪ್ರಹ್ಲಾದನನ್ನು ಪಾಲಿಸಿದ್ದೀಯೆ. ಶಕಟಾಸುರನನ್ನು ವಧಿಸಿ ದುರುಳಕಂಸನನ್ನು ಕೊಂದು ಮಾಗಧನನ್ನು ಕೊಲ್ಲಿಸಿ ವೃತ್ರಾಸುರನನ್ನು ಘಾತಿಸಿದ್ದೀಯೆ. ಖರನ ಪ್ರಾಣವನ್ನು ನೀಗಿಸಿದವನು ನೀನೇ.

೩೨. ಶಿಶುವಾಗಿರುವಾಗಲೇ ನಿನ್ನ ಸಾಮರ್ಥ್ಯದಿಂದ ಬಹುಮಂದಿ ಅಸುರರನ್ನು ಸಂಹರಿಸಿದ್ದೀಯೆ. ಯೌವನಕಾಲದಲ್ಲಿ ಸುದರ್ಶನ ಚಕ್ರವನ್ನು ಹಿಡಿಯದೆ ಪಾಂಡವರಿಂದಲೇ ವೈರಿಗಳನ್ನು ಕೊಲ್ಲಿಸಿ ಭೂಭಾರವನ್ನು ಇಳಿಸಿದ್ದೀಯೆ. ವಿಧವಿಧವಾದ ಸಾಹಸಕಾರ್ಯಗಳನ್ನು ಮಾಡಿ ಮೂರು ಲೋಕಗಳನ್ನು ಮೆಚ್ಚಿಸಿದವನು ನೀನು.

೩೩. ಎಲ್ಲರಲ್ಲಿಯೂ ವ್ಯಾಪಕನಾಗಿ ನೆಲೆಸಿರುವ ನೀನು ದೇವತೆಗಳಿಗೆ ಹಿತಕರನಾಗಿ, ಯಾದವರಿಗೆ ಬಾಂಧವನಾಗಿ, ದಾನವರಿಗೆ ಹಗೆಯಾಗಿ, ಭೀಮಾರ್ಜುನರ ಕೈಯಿಂದ ಕೌರವಕುಲವನ್ನು ಕೊಲ್ಲಿಸಿದ್ದೀಯೆ. ಆಹಾ! ನೀನು ಮಹಾ ಸಮರ್ಥನೆಂಬುದು ಹೌದು.

೩೪. ಅರ್ಜುನನಿಗೆ ಸಾರಥಿಯಾಗಿ, ರಣರಂಗದಲ್ಲಿ ಕುದುರೆಗಳಿಗೆ ಬಾಯಾರಿಕೆಯಾಗಲು ನೀರಿನ ಕೊಳವನ್ನೇ ನಿರ್ಮಿಸಿ, ಅರ್ಜುನನಿಂದ ಸೈಂಧವನ ತಲೆಯನ್ನು ಕತ್ತರಿಸಿ, ಆ ತಲೆಯು ಸೈಂಧವನ ತಂದೆಯ ಕೈಯಲ್ಲಿ ಬೀಳುವಂತೆ ಮಾಡಿದ ಪರಮಸಾಹಸಿ ನೀನು.

೩೫. ಭಾರತ ಯುದ್ಧದಲ್ಲಿ ಶ್ರುತಾಯುಧನೆಂಬುದನು ಗದೆಯಿಂದ ನಿನ್ನನ್ನು ಹೊಡೆಯಲು, ಆ ಗದೆಯೇ ತಿರುಗಿ ಆತನನ್ನು ಬಡಿಯಿತು! ಶ್ರುತಾಯುಧನು ತನ್ನ ಆಯುಧದಿಂದಲೇ ತಾನು ಮಡಿದನು. ಈ ಚಮತ್ಕಾರವೇನೆಂಬುದನು ನಾನು ಅರಿಯೆ. ನಿನ್ನ ಮಾಯೆಯನ್ನು ನೀನೇ ಬಲ್ಲೆ. ನಿನ್ನ ಉದ್ದೇಶವನ್ನು ಯಾರು ತಿಳಿಯಬಲ್ಲರು?

ಟಿಪ್ಪಣಿ :- ಶ್ರುತಾಯಧನು ವರುಣನ ಮಗ. ವರುಣನು ಅವನಿಗೆ ಗದೆಯೊಂದನ್ನು ಕೊಟ್ಟು ಅದನ್ನು ಯುದ್ಧಮಾಡದವರ ಮೇಲೆ ಪ್ರಯೋಗಿಸಬಾರದೆಂದು ತಿಳಿಸಿದ್ದನು. ಯುದ್ಧಮಾಡದಿದ್ದ ಶ್ರೀಕೃಷ್ಣನಮೇಲೆ ಅವನು ಗದೆಯನ್ನು ಪ್ರಯೋಗಿಸಿದಾಗ ಆ ಗದೆಯೇ ಶ್ರುತಾಯುಧನನ್ನು ಕೊಂದಿತು (ಮ.ಭಾ.ದ್ರೋ.೯೨)

ಇಳೆಗೆ ಪತಿಯಾದವನು ಯಾದವ
ರೊಳಗೆ ಬಾಂಧವ ನಿನಗೆ ಸೋದರ
ದಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳುಗುಳದಿ
ಅಳಲಿನಬುಧಿಯೊಳದ್ದಿ ತಂಗಿಯ
ಬಳಲಿಸಿದೆ ಕುಲಗೋತ್ರ ಬಾಂಧವ
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ ೩೬

ತಾಯನಗಲಿದ ತನಯನೀ ರಾ
ಧೇಯನೊಳಗೆ ರಹಸ್ಯದಲಿ ಕುಲ
ದಾಯವನು ನೆರೆ ತಿಳುಹಿಯರ್ಜುನನಿಂದ ಕೊಲ್ಲಿಸಿದೆ
ಮಾಯಮಂತ್ರದ ಕುಟಿಲಗುಣದ
ನ್ಯಾಯವೋ ಇದು ನ್ಯಾಯವೋ ನಿ
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ೩೭

ಕೊಲ್ಲಬಗೆದವನಾಗಿ ನೀ ಹಗೆ
ಯಲ್ಲಿ ಸಖ್ಯವ ಬೆಳಸಲದು ಹಿತ
ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ
ಗೊಲ್ಲನಾರಿಯರೊಳು ಪ್ರವರ್ತಕ
ನಲ್ಲವೇ ಭಾವಿಸಲು ಲೋಕದೊ
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ ೩೮

ಮಗನ ಕೊಂದವನಾಳುವಂತಾ
ಸುಗುಣೆಯರು ಹದಿನಾರು ಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ
ಬಗಬಗೆಯ ರತಿಕಲೆಗಳಲಿ ಕೂ
ರುಗರ ನಾಟಿಸಿ ಮೆರೆದು ನೀನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ೩೯

ಏನು ಮಾಡಿದಡೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ
ನೀನೊಲಿಯೆ ತೃಣ ಪರ್ವತವು ಪುಸಿ
ಯೇನು ನೀ ಪತಿಕರಿಸೆ ಬಳಿಕಿ
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ೪೦

೩೬. ಭೂದೇವಿಗೆ ಪತಿಯಾದ ನೀನು ಯಾದವರ ಬಾಂಧವನೆನಿಸಿದೆ. ಸೋದರಳಿಯನಾದ ಅಭಿಮನ್ಯುವನ್ನೇ ಕೊಲ್ಲಿಸಿ ನಿನ್ನ ತಂಗಿಯಾದ ಸುಭದ್ರೆಯನ್ನು ಶೋಕ ಸಮುದ್ರದಲ್ಲಿ ಮುಳುಗಿಸಿ ಬಳಲಿಸಿದೆ. ಆದರೂ ಕುಲಗೋತ್ರಬಾಂಧವರಲ್ಲಿ ಉತ್ತಮಕೀರ್ತಿಯನ್ನು ಪಡೆದೆ. (ನಿನ್ನ ಉದ್ದೇಶವನ್ನು ಯಾರು ಬಲ್ಲರು?)

೩೭. ತಾಯಿಯನ್ನಗಲಿ ತನ್ನ ತಾಯಿ ಯಾರೆಂದು ತಿಳಿಯದಿದ್ದ ಕರ್ಣನಿಗೆ ಅವನ ಕುಲವನ್ನೂ ಕುಂತಿ ತಾಯಿಯೆಂಬುದನ್ನೂ ಗುಟ್ಟಿನಲ್ಲಿ ತಿಳಿಸಿ, ಅರ್ಜುನನಿಂದಲೇ ಅವನನ್ನು ಕೊಲ್ಲಿಸಿದೆ. ಮಾಯಾತಂತ್ರಗಳನ್ನವಲಂಬಿಸಿ ಕಪಟತನದಿಂದ ಕಾರ್ಯವನ್ನು ಹೀಗೆ ಸಾಧಿಸುವುದು ಅನ್ಯಾಯವೋ ನ್ಯಾಯವೋ? ನಿನ್ನ ನೀತಿಯನ್ನು ನೀನೇ ಬಲ್ಲೆ.

೩೮. ಒಳಗೆ ಕೊಲ್ಲುವ ಉದ್ದಶವನ್ನಿಟ್ಟುಕೊಂಡು ವೈರಿಗಳಲ್ಲಿ ಸ್ನೇಹವನ್ನು ಬೆಳೆಸುತ್ತೀಯೆ. ಇದು ಸರಿಯೆ? ನಿನ್ನ ಗುಣವನ್ನು ಬಲ್ಲವರಿಲ್ಲ. ಯದುಕುಲದಲ್ಲಿ ಅವತರಿಸಿ ಗೊಲ್ಲರ ಹೆಂಗಸರಲ್ಲಿ ಪ್ರೀತಿಯನ್ನು ಬೆಳೆಸಿದೆ. ವಿಚಾರಿಸಿ ನೋಡಿದರೆ ಲೋಕದಲ್ಲಿರುವ ಸಮಸ್ತರೂ ನಿನಗೆ ಒಂದೇ ಬಗೆಯವರು.

೩೯. ಮಗನಾದ ನರಕಾಸುರನನ್ನು ಸಂಹರಿಸಿ, ಅವನು ಸೆರೆಯಲ್ಲಿಟ್ಟಿದ್ದ ಹದಿನಾರು ಸಾವಿರ ಸೊಗಸುಗಾತಿಯರ ಮೋಹದ ಬಲೆಗೆ ಸಿಕ್ಕಿ ಅವರನ್ನು ರಮಿಸಿದೆ. ಆದರೂ ಈ ಜಗತ್ತಿಗೆ ಪಾವನಮೂರ್ತಿಯಾಗಿದ್ದೀಯೆ. (ನಿನ್ನ ನೆಲೆಯನ್ನು ಯಾರು ಬಲ್ಲರು?)

೪೦. ಯಾವ ಕರ್ಮವನ್ನು ಮಾಡಿದರೇನು? ನೀನು ಒಲಿಯದಿದ್ದರೆ ನಮಗೆ ಸದ್ಗತಿ ಇಲ್ಲ. ನೀನು ಒಲಿದರೆ ಭ್ರಮರಕೀಟನ್ಯಾಯದಂತೆ ಹುಲ್ಲು ಕಡ್ಡಿಯೇ ಪರ್ವತವಾಗುತ್ತದೆ. ಇದರಲ್ಲಿ ಸುಳ್ಳೇನು? ನಿನ್ನ ಅನುಗ್ರಹವಾದ ಬಳಿಕ ನಮಗೆ ಚಿಂತೆ ಏಕೆ?

ಟಿಪ್ಪಣಿ:- ಭ್ರಮರ-ಕಣಜದ ಹುಳು-ದುಂಬಿ. ಇದು ಕ್ರಿಮಿಯನ್ನು ತನ್ನ ಗೂಡಿನಲ್ಲಿ ತಂದಿಟ್ಟು ಗುಂಯ್ ಎನ್ನುತ್ತ ಅದರ ಬಳಿ ಸುತ್ತಾಡುತ್ತದೆ. ಕೆಲವು ದಿನಗಳಲ್ಲಿ ಆ ಕ್ರಿಮಿಯು ಭ್ರಮರವಾಗುತ್ತದೆ.

ಎಷ್ಟು ಮಾಡಲು ಮುನ್ನ ತಾ ಪಡೆ
ದಷ್ಟುಯೆಂಬುದ ಲೋಕದೊಳು ಮತಿ
ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ
ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟ ವರ ತಪ್ಪಿತೆ ಕುಚೇಲನಿ
ಗಿಷ್ಟ ಬಾಂಧವ ನೀನು ರಕ್ಷಿಸು ನಮ್ಮನನವರತ ೪೧

ತನ್ನ ದೇಹಾತುರದಲಡವಿಯೊ
ಲನ್ಯರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ
ಧನ್ಯನಾದನು ಮುನಿಕುಲದ ಸಂ
ಪನ್ನನಾದನು ನೀನೊಲಿದ ಬಳಿ
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ೪೨

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಾಪರಮೂರ್ತಿಯೆಂದೆನುತ
ನಿನ್ನ ಭಜಿಸಿದ ಸಾರ್ವಭೌಮರಿ
ಗಿನ್ನು ಇಹಪರವುಂಟು ಸದ್ಗುಣ
ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ ೪೩

ವೀರರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ
ಸೇರಿಸಿದೆ ನಿನ್ನಂತೆ ಕೊಡುವ ಉ
ದಾರಿ ಯಾವನು ತ್ರಿಜಗದೊಳಗಾ
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ೪೪

ಶಿವ ಶಿವಾ ನೀ ಮಾಡಿದುಪಕಾ
ರವನು ಮರೆತವರುಂಟೆ ಪಾಪದಿ
ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ
ಜವನವರ ಕಯ್ಗೊಪ್ಪಿಸದೆ ಕಾ
ಯ್ದವನು ನೀ ಮಾಧವನು ಮಿಕ್ಕಾ
ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ ೪೫

೪೧. ಎಷ್ಟು ಮಾಡಿದರೂ ತಾನು ಪಡೆದಷ್ಟೇ ಬರುತ್ತದೆಯೆಂದು ಮತಿಗೆಟ್ಟ ಜನರು ಆಡಿಕೊಳ್ಳುತ್ತಾರೆ. ಆ ಮಾತಿರಲಿ. ಧ್ರುವನಿಗೆ ಯಾರಿಂದ ಪಟ್ಟವಾಯಿತು? ನಿನ್ನಿಂದಲೇ ಅಲ್ಲವೆ? ಕುಚೇಲನಿಗೆ ನೀನು ಕೊಟ್ಟ ವರ ಸುಳ್ಳಾಯಿತೆ? ಇಷ್ಟರಾದ ಭಕ್ತರನ್ನು ಬಂಧುವಾಗಿ ಸಲಹತಕ್ಕವನು ನೀನು.

೪೨. ಒಬ್ಬ ಬೇಡನು ತನ್ನ ದೇಹಪೋಷಣೆಗಾಗಿ ಅಡವಿಯಲ್ಲಿ ಜನರನ್ನು ಅಡ್ಡಗಟ್ಟಿ ಕೊಲ್ಲುತ್ತಿದ್ದನು. ಆತನೇ ನಿನ್ನ ನಾಮಾವಳಿಯಲ್ಲಿ ಶ್ರೇಷ್ಠವಾದ 'ರಾಮ' ಎಂಬ ಎರಡಕ್ಷರದ ಪದವನ್ನು ಜಪಿಸುತ್ತ ವಾಲ್ಮೀಕಿಮುನಿಯೆನಿಸಿ ಧನ್ಯನಾದನು, ಮುನಿಶ್ರೇಷ್ಠನಾದನು. ನೀನು ಒಲಿದಮೇಲೆ ಪಾಪ ಎಂಬುದು ಉಳಿಯುವುದುಂಟೆ?

೪೩. ನಿನ್ನ ಪತ್ನಿಯಾದ ಸೀತೆಯನ್ನು ರಾವಣನು ಬಯಸಿದನು. ಆ ದುರಾತ್ಮನ ತಮ್ಮನಾದ ವಿಭೀಷಣನನ್ನು ಕರುಣೆಯಿಂದ ಮನ್ನಿಸಿದವನು ನೀನು. ದಯಾಮೂರ್ತಿಯಾದ ನಿನ್ನನ್ನು ಈ ಭೂಮಿಯಲ್ಲಿ ಭಜಿಸುವ ಸರ್ವರಿಗೂ ಇಹಪರಗಳುಂಟು. ಹೇ ಸದ್ಗುಣ ನಿಧಿಯೆ, ರಕ್ಷಿಸು ನಮ್ಮನನವರತ.

೪೪. ರಾವಣನೊಡನೆ ಹೋರಾಡಿದ ಕಪಿವೀರರಲ್ಲಿ ಹನುಮಂತನು ಎಷ್ಟು ಧನ್ಯನೊ! ಆತನಿಗೆ ಮುಂದಿನ ಬ್ರಹ್ಮಪಟ್ಟವನ್ನು ಅನುಗ್ರಹಿಸಿದ್ದೀಯೆ. ಮೂರುಲೋಕ ಗಳಲ್ಲಿಯೂ ನಿನ್ನಂತೆ ಉದಾರವಾಗಿ ಕೊಡುವ ದಾತನು ಯಾವನಿದ್ದಾನೆ? ಆದ್ದರಿಂದ ನಿನ್ನನ್ನು ನಂಬಿದೆನು.

೪೫. ನೀನು ಮಾಡಿದ ಉಪಕಾರವನ್ನು ಮರೆತವರುಂಟೆ? ಪಾಪಿಯಾದ ಅಜಾಮಿಳನು ಸಾಯುವ ಕಾಲದಲ್ಲಿ ನಿನ್ನನ್ನು ಸ್ಮರಿಸಲಾಗಿ, ಅವನನ್ನು ಯಮದೂತರಿಗೆ ಒಪ್ಪಿಸದೆ ಕಾಪಾಡಿರುವೆ. ಮಾಧವ, ಮಿಕ್ಕವರಿಗೆ ನಿನ್ನಷ್ಟು ಕರುಣೆಯುಂಟೆ? ಸ್ವಾಮಿ, ರಕ್ಷಿಸು ನಮ್ಮನನವರತ.

ಹೆತ್ತ ಮಗಳನು ಮದುವೆಯಾದವ
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನು ಮಾವನ ಕೃತಘ್ನನು ನಿನಗೆ ಮೈದುನನು
ಹೊತ್ತು ತಪ್ಪಿಸಿ ಕಾಮದಲಿ ಮುನಿ
ಪೋತ್ತಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ೪೬

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ
ನಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು
ಬಲ್ಲರಿಳೆಯೊಳು ಭಾಗವತರಾ
ದೆಲ್ಲರಿಗೆ ವಂದಿಸದ ಕುಜನರಿ
ಗಿಲ್ಲ ಸದ್ಗತಿ ನೋಡು ರಕ್ಷಿಸು ನಮ್ಮನನವರತ ೪೭

ಸಿರಿಯ ಸಂಪತ್ತಿನಲಿ ನೀ ಮೈ
ಮರೆದು ಮದಗರ್ವದಲಿ ದೀನರ
ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ
ಹರ ಹರ ಅನಾಥರನು ಪಾಲಿಸಿ
ವರವ ಕೊಡುವ ಉದಾರಿಯೆಂಬೀ
ಬಿರುದ ಬಿಡುವರೆ ತಂದೆ ರಕ್ಷಿಸು ನಮ್ಮನನವರತ ೪೮

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ೪೯

ತರಳತನದಲಿ ಕೆಲವು ದಿನದುರು
ಭರದ ಗರ್ವದಿ ಕೆಲವು ದಿನ ಮೈ
ಮರೆದು ನಿಮ್ಮಡಿಗೆರಗದಾದೆನು ವಿಷಯಕೇಳಿಯಲಿ
ನರಕಭಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ೫೦

೪೬. ಮಗಳನ್ನು ಮದುವೆಯಾದ ಬ್ರಹ್ಮನು ನಿನ್ನ ಅನುಗ್ರಹದಿಂದ ಉತ್ತಮನೆನಿಸಿದನು. ಗುರುಪತ್ನಿಯನ್ನು ಬಯಸಿದವನೂ ಮಾವನಿಗೆ ಕೃತಘ್ನನಾಗಿ ನಡೆದುಕೊಂಡವನೂ ಆದ ಚಂದ್ರನು ನಿನಗೆ ಮೈದುನನಾದನು. ಗೌತಮ ಮುನೀಶ್ವರನ ಪತ್ನಿಯಾದ ಅಹಲ್ಯೆಯನ್ನು ಕಾಮಿಸಿದ ಇಂದ್ರನಿಗೆ ಶ್ರೇಷ್ಠಪದವಿಯನ್ನು ಕೊಟ್ಟಿದ್ದೀಯೆ. (ಪಾಪಕೃತ್ಯವನ್ನು ಮಾಡಿದರೂ ನಿನ್ನ ಭಕ್ತರನ್ನು ಕ್ಷಮಿಸುತ್ತೀಯೆ)

ಟಿಪ್ಪಣಿ:- ಬ್ರಹ್ಮನು ತನ್ನ ಮಗಳಾದ ಸರಸ್ವತಿಯನ್ನು ಮದುವೆಯಾದನು. ಚಂದ್ರನು ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಕಾಮಿಸಿದನು. ಅಲ್ಲದೆ ರೋಹಿಣಿಯಲ್ಲಿ ಮಾತ್ರ ಅನುರಕ್ತನಾಗಿ ಉಳಿದ ಅಶ್ವಿನೀ ಮುಂತಾದವರನ್ನು ಪ್ರೀತಿಸದೆ, ಮಾವನಾದ ದಕ್ಷಬ್ರಹ್ಮನಿಗೆ ಕೃತಘ್ನನಾಗಿ ನಡೆದುಕೊಂಡನು-ಎಂದು ಪುರಾಣಕಥೆಗಳುಂಟು.

೪೭. 'ದೇವರು ಇಲ್ಲಿದ್ದಾನೆ ಅಲ್ಲಿಲ್ಲ. ಅಲ್ಲಿದ್ದಾನೆ ಇಲ್ಲಿಲ್ಲ' ಎಂಬ ಮಾತು ಸಲ್ಲದು. ಒಳಗೆ ಹೊರಗೆ ಎಲ್ಲೆಲ್ಲಿಯೂ ನೀನು ಇದ್ದೀಯೆ ಎಂಬುದನ್ನು ಭಕ್ತರು ಬಲ್ಲರು. ಅಂತಹ ಮಹಾತ್ಮರನ್ನು ವಂದಿಸದ ದುರುಳರಿಗೆ ಸದ್ಗತಿ ಇಲ್ಲ.

೪೮. ಕೆಲವು ಜನರ ಸಿರಿವಂತಿಕೆಯನ್ನೂ ಮದಗರ್ವಗಳನ್ನೂ ನೋಡಿ ಮೈ ಮರೆತು, ನಮ್ಮಂತಹ ದೀನರನ್ನು ನೀನು ಕರುಣೆಯಿಂದ ನೋಡದೆ ಉಪೇಕ್ಷಿಸಬಹುದೆ? ಹರ ಹರ! 'ಅನಾಥರನ್ನು ಪಾಲಿಸಿ ವರವನ್ನು ಕೊಡುವ ಉದಾರಿ' ಎಂಬ ಬಿರುದನ್ನು ತ್ಯಜಿಸಿಬಿಡುವೆಯಾ? ಓ ತಂದೆ, ರಕ್ಷಿಸು ನಮ್ಮನನವರತ.

೪೯. ನಾನು ಅನಾಥ. ಸಮಸ್ತಲೋಕಗಳಿಗೂ ನೀನು ದಾತ. ನಾನು ಬುದ್ಧಿಗೇಡಿ. ನೀನು ಮಹಾಮಹಿಮನಾದ ಕೈವಲ್ಯಪತಿ. ನನಗೆ ಏನು ತಿಳಿದಿದೆ? ಅಜ್ಞಾನಿ ನಾನು. ನೀನಾದರೋ ಜ್ಞಾನಮೂರ್ತಿ, ದೇವ, ನಿನ್ನ ಸಮಾನರುಂಟೆ?

ಮರೆದೆನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಹರಿಯೆಂ
ದೊರೆಯುವೆನು ಮನವೇಕಭಾವದೊಳಿಲ್ಲ ನಿಮ್ಮಡಿಯ
ಮರೆದು ಬಾಹಿರನಾದವನು ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ ೫೧

ಧಾರಿಣಿಗೆ ವರ ಚಕ್ರವರ್ತಿಗ
ಳಾರು ಮಂದಿ ನೃಪಾಲಕರು ಹದಿ
ನಾರು ಮಂದಿಯು ಧರಣಿಯನು ಮುನ್ನಾಳ್ದ ನೃಪರೆನಿತೋ
ವೀರರನು ಮೆಚ್ಚಿದಳೆ ಧರಣೀ
ನಾರಿ ಬಹು ಮೋಹದೊಳು ನಿನ್ನನು
ಸೇರಿಯೋಲಯಿಸುವಳು ರಕ್ಷಿಸು ನಮ್ಮನನವರತ ೫೨

ಭಾರಕರ್ತನು ನೀನು ಬಹು ಸಂ
ಸಾರಿಯೆಂಬುದ ನಿಗಮತತಿ ಕೈ
ವಾರಿಸುತ್ತಿದೆ ದಿವಿಜಮನುಜಭುಜಂಗರೊಳಗಿನ್ನು
ಆರಿಗುಂಟು ಸ್ವತಂತ್ರ ನಿನ್ನಂ
ತಾರು ಮುಕ್ತಿಯನೀವ ಸದ್ಗುರು
ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ ೫೩

ಗತಿವಿಹೀನರಿಗಾರು ನೀನೇ
ಗತಿ ಕಣಾ ಪತಿಕರಿಸಿಕೊಡು ಸ
ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ
ಶ್ರುತಿವಚನವಾಡುವುದು ಶರಣಾ
ಗತರ ಸೇವಕನೆಂದು ನಿನ್ನನು
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ೫೪

ಈಗಲೋ ಈ ದೇಹವಿನ್ನಾ
ವಾಗಲೋ ನಿಜವಿಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆಂಬ
ರಾಗಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ೫೫

೫೦. ಮೊದಲು ಕೆಲವು ದಿನಗಳನ್ನು ಹುಡುಗಾಟಿಕೆಯಲ್ಲಿ ಕಳೆದೆನು. ಆಮೇಲೆ ಯೌವನದ ಗರ್ವದಿಂದ ಮೈಮರೆತು ವಿಷಯ ಸುಖವನ್ನು ನೆಚ್ಚಿ ಪರಧನ ಪರಸತಿಯರನ್ನು ಬಯಸಿದೆನು. ನರಕದಲ್ಲಿ ಬೀಳಲು ಯೋಗ್ಯನಾದೆನು. ಸ್ವಾಮಿ, ನನ್ನ ಪಾಪವನ್ನು ಕಳೆದು ಪಾಲಿಸು.

೫೧. ಸುಖ ಬಂದಾಗ ನಿನ್ನನ್ನು ಮರೆತೆನು. ಕಷ್ಟ ಬಂದಾಗ ಮರೆಯದೆ 'ಓ ಹರಿ' ಎಂದು ಒರಲುತ್ತೇನೆ! ನನ್ನ ಮನಸ್ಸು ನಿನ್ನಲ್ಲಿ ಏಕರೂಪವಾಗಿ ನೆಲೆಸಿಲ್ಲ. ನಿನ್ನ ಪಾದವನ್ನು ಮರೆತು ದುರುಳನಾದೆನು. ನಾನು ಮರೆತರೂ ನೀನು ಮರೆಯಬಹುದೆ! ಹಸು ತನ್ನ ಕಂದನನ್ನು ಮರೆಯುವುದೆ? ಮಮತೆಯಿಂದ ರಕ್ಷಿಸು ನಮ್ಮನನವರತ.

೫೨. ಈ ಭೂಮಿಯನ್ನಾಳಿದವರಲ್ಲಿ ಆರು ಚಕ್ರವರ್ತಿಗಳಿಗೂ ಹದಿನಾರು ರಾಜರೂ ಪ್ರಸಿದ್ಧರಾಗಿ ಗತಿಸಿದರು. ಆಳಿದ ಇತರ ರಾಜರುಗಳು ಇನ್ನೆಷ್ಟೋ! ಭೂದೇವಿಯು ಯಾರನ್ನಾದರೂ ಶಾಶ್ವತವಾಗಿ ಮೆಚ್ಚಿದಳೆ? ನಿನ್ನೊಬ್ಬನನ್ನು ಮಾತ್ರ ಸ್ಥಿರವಾಗಿ ಮೆಚ್ಚಿ ಓಲೈಸುತ್ತಿದ್ದಾಳೆ.

ತಾತ್ಪರ್ಯ:- ನೆಲವಾಗಲಿ ಹಣವಾಗಲಿ ಯಾರಿಗೂ ಸ್ಥಿರವಲ್ಲ. ಸ್ಥಿರನಾದವನು ಭಗವಂತನೊಬ್ಬನೇ. ಅವನನ್ನೇ ಭಜಿಸಬೇಕು.

೫೩. ಜಗತ್ತೇ ನಿನ್ನ ಕುಟುಂಬವೆಂದೂ ಇದನ್ನು ಪಾಲಿಸುವ ಹೊಣೆ ನಿನ್ನವೆಂದೂ ವೇದಗಳು ಹೇಳುತ್ತಿವೆ. ದೇವತೆಗಳಲ್ಲಾಗಲಿ ಮನುಷ್ಯರಲ್ಲಾಗಲಿ ಪಾತಾಳದಲ್ಲಿರುವ ಭುಜಂಗರಲ್ಲಾಗಲಿ, ನಿನಗಿರುವ ಸ್ವಾತಂತ್ರ್ಯ ಯಾರಿಗುಂಟು? ಮುಕ್ತಿಯನ್ನು ಕೊಡುವ ಸದ್ಗುರು ನೀನಲ್ಲದೆ ಇನ್ನು ಯಾರು? ಹೇ ಜಗನ್ನಾಥ, ರಕ್ಷಿಸು ನಮ್ಮನನವರತ.

೫೪. ಹೇ ದೇವ, ಗತಿಯಿಲ್ಲದವರಿಗೆ ನೀನೇ ಗತಿ, ನನಗೆ ಸದ್ಗತಿಯನ್ನು ಕೊಡು. ನಿನಗೆ ನಾನು ಯಾವ ಅಪರಾಧವನ್ನೂ ಮಾಡಿಲ್ಲ. ನೀನೇ ಶರಣಾಗತರನ್ನು ಕಾಪಾಡುವೆಯೆಂದು ವೇದವು ಘೋಷಿಸುತ್ತದೆ. ಆದ್ದರಿಂದ ನಿನ್ನನ್ನೇ ನಂಬಿದ್ದೇನೆ. ನನ್ನನ್ನು ಸಲಹು.

೫೫. ಈ ದೇಹವು ಈಗಲೇ ಹೋಗುವುದೋ ಅಥವಾ ಇನ್ನು ಯಾವಾಗ ಹೋಗುವುದೋ, ಒಟ್ಟಿನಲ್ಲಿ ಇದು ಸ್ಥಿರವಲ್ಲ ಎಂಬುದನ್ನರಿಯದೆ ಮಡದಿ, ಮನೆ, ಮನೆಗೆಲಸ-ಎಂಬ ವ್ಯಾಮೋಹದಲ್ಲಿ ಮುಳುಗಿ ಮುಂದಿನ ಆಗು ಹೋಗುಗಳನ್ನು ಅರಿಯಲಿಲ್ಲ. ಈಗ ನಿನ್ನ ದರ್ಶನವನ್ನು ಬಯಸುತ್ತಿದ್ದೇನೆ.

ಮಾಂಸ ರಕ್ತದ ಮಡುವಿನಲಿ ನವ
ಮಾಸ ಜನನಿಯ ಜಠರದೊಳಗಿರು
ವಾ ಸಮಯದಲ್ಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು
ನೀ ಸಲಹಿದವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ೫೬

ಬಲು ಮೃಗವು ಮರ ಪಕ್ಷಿ ಕೀಟಕ
ಜಲಚರೌಘದಿ ಜನಿಸಿದೆನು ಕೋ
ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ೫೭

ಪಂಚಭೂತದ ಕಾಯದೊಳು ನೀ
ವಂಚಿಸದೆಯಿರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದು ಮರುಳುತನದಿಂದ
ಮಿಂಚುವವರಿನ್ನುಂಟೆ ತಿಳಿಯೆ ಪ್ರ
ಪಂಚವೆಲ್ಲಕೆ ತಪ್ಪಿದವ ನೀ
ಕೊಂಚಗಾರನ ಕೃಷ್ಣ ರಕ್ಷಿಸು ನಮ್ಮನನವರತ ೫೮

ಹಲವು ಕರ್ಮಗಳಿಂದ ಮೂತ್ರದ
ಬಿಲಗಳಲಿ ಸಂಚರಿಸಿ ಪದವಿಯ
ಫಲವ ಕಾಣದೆ ಹೊಲಬುದಪ್ಪಿದೆನೆನ್ನ ದೇಹದಲಿ
ಒಲಿದು ನೀನಿರೆ ನಿನ್ನ ಸಲುಗೆಯ
ಒಲುಮೆಯಲಿ ಬರಸೆಳೆವೆ ಮುಕುತಿಯ
ಲಲನೆಯನೆ ತಳುವಿಲ್ಲ ರಕ್ಷಿಸು ನಮ್ಮನನವರತ ೫೯

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು
ಸತ್ತು ಹುಟ್ಟುವ ಹುಟ್ಟಿ ಹಿಂಗುವ
ಸುತ್ತ ತೊಡಕನು ಮಾಣಿಸೆಲೆ ಪುರು
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ೬೦

೫೬. ಒಂಬತ್ತು ತಿಂಗಳು ತಾಯಿಯ ಹೊಟ್ಟೆಯಲ್ಲಿ ರಕ್ತಮಾಂಸಗಳ ಮಡುವಿನಲ್ಲಿ ಇದ್ದೆನು. ಅಲ್ಲಿಯೂ ನನ್ನ ಯೋಗಕ್ಷೇಮಗಳನ್ನು ನೋಡಿಕೊಂಡು ಸಲಹಿದ ಪ್ರಭು ನೀನಲ್ಲವೆ? ದಯಾಸಮುದ್ರನಾದ ನೀನಿರುವಾಗ ಬ್ರಹ್ಮನನ್ನು ನಾನು ಲೆಕ್ಕಿಸಲಾರೆ. ಅವನ ಹಂಗೇನು? ರಕ್ಷಿಸು ನಮ್ಮನನವರತ.

೫೭. ಇದುವರೆಗೆ ಮೃಗ, ಮರ, ಹಕ್ಕಿ, ಹುಳು, ಮೀನು-ಮುಂತಾದ ನಾನಾ ಯೋನಿಗಳಲ್ಲಿ ಹುಟ್ಟಿ ಅಲೆದು ಈಗ ಮನುಷ್ಯ ಜನ್ಮಕ್ಕೆ ಬಂದಿದ್ದೇನೆ. ಇನ್ನು ಕೋಟಲೆಗೊಳಿಸಬೇಡ. ಅಕಟ! ಮತ್ತೆ ಯಮನಿಂದ ಕೊಲ್ಲಿಸಬೇಡ. ಹೇ ಮುರಾರಿ, ಭಕ್ತಿಯಿಂದ ನಿನ್ನನ್ನು ಭಜಿಸುವ ನನ್ನನ್ನೇ ಮತ್ತೆಮತ್ತೆ ಕೊಲೆಗೆ ಈಡುಮಾಡಲು ಕಾರಣವೇನು?

೫೮. ಆಕಾಶ, ವಾಯು, ಅಗ್ನಿ, ನೀರು, ಭೂಮಿ-ಎಂಬ ಪಂಚಭೂತ ಗಳಿಂದಾದದ್ದು ಈ ಶರೀರ. ಇದರಲ್ಲಿ ತಪ್ಪದೆ ನೀನು ಇರುತ್ತಿರುವಾಗ, ಈ ಶರೀರವು ನನ್ನ ಸಂಚಿತದ ಫಲವೆಂದು ಹೇಳುವುದೇಕೆ? (ಈ ಶರೀರವು ನಿನ್ನ ಅನುಗ್ರಹದಿಂದಲೇ ದೊರಕಿದೆ). ಮರುಳುತನದಿಂದ ತಪ್ಪುಮಾಡದವರು ಯಾರಿದ್ದಾರೆ? ಜನರಿಗೆ ಗೋಚರಿಸದೆ ಈ ಪ್ರಪಂಚವನ್ನೇ ಮೀರಿ ನಿಂತ ನೀನು ಸಾಮಾನ್ಯನೆ? ರಕ್ಷಿಸು ನಮ್ಮನನವರತ.

೫೯. ನನ್ನ ಕರ್ಮಗಳ ದೆಸೆಯಿಂದ ಮೂತ್ರದ ಬಿಲದಲ್ಲಿ ಅಲೆದಲೆದು ನಾನಾ ಜನ್ಮಗಳನ್ನೆತ್ತಿದೆನು. ಸರಿಯಾದ ಫಲವನ್ನು ಕಾಣದೆ ದಾರಿತಪ್ಪಿದೆನು. ನನ್ನ ದೇಹದಲ್ಲಿ ನೀನು ಅಂತರ್ಯಾಮಿಯಾಗಿ ನೆಲೆಸಿದ್ದರೂ ನಿನ್ನ ಒಲುಮೆಯನ್ನು ಪಡೆದು ಮುಕ್ತಿಯೆಂಬ ತರುಣಿಯರನ್ನು ಪಡೆಯಲು ನನ್ನಿಂದಾಗಲಿಲ್ಲ.

೬೦. ಹೇ ಪುರುಷೋತ್ತಮ, ಇದುವರೆಗೆ ನಾನಾ ಶರೀರಗಳಲ್ಲಿ ಜನ್ಮವೆತ್ತಿದೆನು. ಬೇರೆ ಬೇರೆ ದೇಹಗಳನ್ನು ಹೊತ್ತು ಹೊತ್ತು ಅಲೆದೆನು. ನಿನ್ನ ಪಾದವನ್ನು ಕಾಣದೆ ತೊಳಲಿ ಬಳಲಿದೆನು. ಸಾಯುವುದು-ಹುಟ್ಟುವುದು-ಸಾಯುವುದು- ಹೀಗೆ ತುದಿಯಿಲ್ಲದೆ ಸುತ್ತುವ ತೊಡಕನ್ನು, ಸ್ವಾಮಿ, ಕೃಪೆಯಿಂದ ಪರಿಹರಿಸು.

ಇಂದು ಈ ಜನ್ಮದಲಿ ನೀನೇ
ಬಂಧು ಹಿಂದಣ ಜನ್ಮದಲಿ ಬಳಿ
ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು
ಎಂದಿಗೂ ತನಗಿಲ್ಲ ತನುಸಂ
ಬಂಧ ನಿನ್ನದು ಎನಗೆ ನೀ ಗತಿ
ಯೆಂದು ಬಿನ್ನವಿಸಿದೆನು ರಕ್ಷಿಸು ನಮ್ಮನನವರತ ೬೧

ಗಣನೆಯಿಲ್ಲದ ಜನನಿಯರು ಮೊಲೆ
ಯುಣಿಸಲಾ ಪಯಬಿಂದುಗಳನದ
ನೆಣಿಸಲಳವೇ ಸಪ್ತಸಾಗರಕಧಿಕವೆನಿಸಿಹುದು
ಬಣಗು ಕಮಲಜನದಕೆ ತಾನೇ
ಮಣೆಯಗಾರನು ಈತ ಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ೬೨

ಲೇಸ ಕಾಣೆನು ಜನನಮರಣದಿ
ಗಾಸಿಯಾದೆನು ನೊಂದೆನಕಟಾ
ಲೇಸೆನಿಸಿ ನೋಡಲು ಪರಾಪರವಸ್ತು ನೀನಾಗಿ
ನೀ ಸಲಹುವವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇನು ರಕ್ಷಿಸು ನಮ್ಮನನವರತ ೬೩

ಕಾಪುರುಷರೈದಾರು ಮಂದಿ ಸ
ಮೀಪದಲಿ ಕಾಡುವರು ಎನ್ನನು
ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ
ಶ್ರೀಪದಾಬ್ಜದ ಸೇವೆಯಲಿ ನೆರೆ
ಪಾಪವನು ಪರಿಹರಿಸೆ ನೀ ನಿಜ
ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ೬೪

ಐದು ತತ್ತ್ವಗಳಾದವೊಂದ
ಕ್ಕೈದು ಕಡೆಯಲಿ ತತ್ತ್ವವಿಪ್ಪ
ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು
ಭೇದಿಸದೆ ಜೀವಾತ್ಮ ತಾ ಸಂ
ಪಾದಿಸಿದ ಸಂಚಿತಸುಕರ್ಮವ
ನಾದರಿಸಿ ಕಯ್ಕೊಂಡು ರಕ್ಷಿಸು ನಮ್ಮನನವರತ ೬೫

೬೧. ಈ ಜನ್ಮದಲ್ಲಾಗಲಿ ಹಿಂದಿನ ಮುಂದಿನ ಜನ್ಮಗಳಲ್ಲಾಗಲಿ ಈ ದೇಹಕ್ಕೆ ನೀನೇ ಒಡೆಯ. ಎಂದಿಗೂ ಈ ದೇಹದ ಒಡೆಯತನ ನನಗಿಲ್ಲ, ಎಲ್ಲವೂ ನಿನ್ನದೇ. ನನಗೆ ನೀನೇ ಗತಿಯೆಂದು ಬಿನ್ನೈಸುತ್ತೇನೆ. ರಕ್ಷಿಸು ನಮ್ಮನನವರತ.

೬೨. ಇದುವರೆಗೆ ನಾನಾ ಜನ್ಮಗಳಲ್ಲಿ ಎಷ್ಟುಮಂದಿ ತಾಯಂದಿರ ಮೊಲೆ ಹಾಲನ್ನು ನಾನು ಕುಡಿದೆನೊ ! ಹಾಲಿನ ಹನಿಗಳನ್ನು ಸೇರಿಸಿದರೆ ಏಳು ಸಮುದ್ರಗಳಿಗಿಂತ ದೊಡ್ಡದಾಗಬಹುದು ! ಎಷ್ಟು ತಾಯಂದಿರು ನನಗಾದರೆಂದು ಎಣಿಸಲು ಸಾಧ್ಯವೆ ? ಹಾಳಾದ ಆ ಬ್ರಹ್ಮನೇ ಇದಕ್ಕೆ ಹೊಣೆ ! ಓ ಸ್ವಾಮಿ, ಅವನ ಕುಣಿಕೆಗಳಿಂದ ಬಿಡಿಸಿ ನನ್ನನ್ನ ರಕ್ಷಿಸು.

೬೩. ಈ ಹುಟ್ಟುಸಾವುಗಳ ಗೊಂದಲದಲ್ಲಿ ಸಿಕ್ಕಿ ಗಾಸಿಯಾದೆನು; ನೊಂದೆನು; ಲೇಸನ್ನು ಕಾಣದಾದೆನು. ಪರಾತ್ಪರವಸ್ತುವಾದ ನೀನೊಬ್ಬನೇ ಸತ್ಯ; ಮಂಗಳಕಾರಿ. ಕರುಣಾಸಮುದ್ರನಾದ ನೀನು ನನ್ನನ್ನು ಸಲಹಬೇಕು. ನೀನಿರಲು ಇನ್ನು ಬ್ರಹ್ಮನ ಹಂಗೇನು?

೬೪. ಕಾಮ, ಕ್ರೋಧ ಮುಂತಾದ ಐದಾರು ಮಂದಿ ದುರುಳರು ಬಳಿಯಲ್ಲಿದ್ದು ನನ್ನುನ್ನು ಕಾಡುತ್ತಿದ್ದಾರೆ! ಅವರ ಕಾಟವನ್ನು ತಪ್ಪಿಸದೆ ನೀನು ಸುಮ್ಮನಿರುವುದು ಲೇಸಲ್ಲ. ಕೃಪೆಮಾಡಿ ನಿನ್ನ ನಿಜರೂಪವನ್ನು ತೋರಿಸು. ನಿನ್ನ ಅಡಿದಾವರೆಗಳನ್ನು ಸೇವಿಸಿ ಪಾಪವನ್ನು ಕಳೆದುಕೊಳ್ಳುವೆನು.

೬೫. ಒಂದೇ ಒಂದು ಮೂಲವಸ್ತುವು ಆಕಾಶ, ವಾಯು-ಮುಂತಾದ ಐದು ತತ್ವಗಳಾಗಿ ಪರಿಣಮಿಸಿತು. ಕಡೆಯಲ್ಲಿ ಇಪ್ಪತ್ತೈದು ತತ್ವಗಳಾಗಿ ಈ ದೇಹವಾಯಿತು. ಈ ದೇಹದಲ್ಲಿ ನೀನಿರುವಾಗ ಜೀವಾತ್ಮನು ತನ್ನ ಸಂಚಿತಕರ್ಮವನ್ನು ಹೋಗಲಾಡಿಸಿ ಕೊಳ್ಳಲಾರನೆ ? ಕೃಪೆಮಾಡಿ ಕೈಹಿಡಿದು ರಕ್ಷಿಸು ನಮ್ಮನನವರತ.

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯ ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀನಿರ್ದಗಲಿದಡೆ ಒಣ
ಹೆಂಟೆಯಲಿ ಮುಚ್ಚುವರು ದೇಹದ
ಲುಂಟೆ ಫಲ ಪುರುಷಾರ್ಥ ರಕ್ಷಿಸು ನಮ್ಮನನವರತ ೬೬

ಸ್ನಾನ ಸಂಧ್ಯಾ ಜಪ ತಪ
ದಾನ ಧರ್ಮ ಪರೋಪಕಾರವಿ
ಹೀನಕರ್ಮದೊಳಿರುವೆನಲ್ಲದೆ ಬೇರೆ ಗತಿಯುಂಟೆ
ಏನು ಮಾಡಿದಡೇನು ಮುಕ್ತಿ
ಜ್ಞಾನವಿಲ್ಲದಡಿಲ್ಲ ಭಕ್ತಿಗೆ
ನೀನೆ ಕಾರಣವಾಗಿ ರಕ್ಷಿಸು ನಮ್ಮನನವರತ ೬೭

ಕೋಪವೆಂಬುದು ತನುವಿನಲಿ ನೆರೆ
ಪಾಪ ಪಾತಕದಿಂದ ನರಕದ
ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೆ
ರಾಪು ಮಾಡದೆ ಬಿಡನು ಯಮನು ನಿ
ರಾಪರಾಧಿಯು ನೋಡಿ ಕೀರ್ತಿಕ
ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ೬೮

ನಿನ್ನ ಸೂತ್ರದೊಳಾಡುವವು ಚೈ
ತನ್ನ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಹೂಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯ ಕರ್ಮ ಸುಕರ್ಮವೆಲ್ಲವ
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ೬೯

ಒಡೆಯ ನೀನೆಂದರಿತು ನಾ ನಿ
ನ್ನಡಿಯ ಭಜಿಸದೆ ದುರುಳನಾದೆನು
ಮಡದಿಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ
ಮಡದಿ ಯಾರೀ ಮಕ್ಕಳ್ಯಾರೀ
ಒಡಲಿಗೊಡೆಯನು ನೀನು ನೀ ಕೈ
ವಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ೭೦

೬೬. ಇದು ಎಂಟು ಗೇಣಿನ ದೇಹ. ರೋಮಗಳು ಎಂಟು ಕೋಟಿ. ಕೀಲುಗಳು ಅರವತ್ತೆಂಟು ಮಾಂಸದಿಂದ ಮಾಡಿದ ಮನೆ ಇದು. ಇದರಲ್ಲಿ ನೆಂಟನಾದ ನೀನು ಇರುವವರೆಗೆ ಜನರು ಆದರಿಸುತ್ತಾರೆ. ನೀನು ಹೊರಟೆಯೆಂದರೆ ಈ ದೇಹವನ್ನು ಒಣಹೆಂಟೆಯಲ್ಲಿ ಹೂಳುತ್ತಾರೆ ! ಈ ದೇಹದಲ್ಲಿ ಯಾವ ಪುರುಷಾರ್ಥ ಉಂಟು ?

೬೭. ಸ್ನಾನ, ಸಂಧ್ಯಾವಂದನೆ, ಧ್ಯಾನ, ಜಪ, ತಪಸ್ಸು, ದಾನ ಧರ್ಮಗಳು, ಪರೋಪಕಾರ–ಇವುಗಳನ್ನು ಬಿಟ್ಟು ಇನ್ನು ಯಾವುದಾದರೊಂದು ಕೆಲಸದಲ್ಲಿ ಸದಾ ತೊಡಗಿರುತ್ತೇನೆ! ಯಾವ ಕೆಲಸವನ್ನೇ ಮಾಡಲಿ, ಜ್ಞಾನವಿಲ್ಲದೆ ಮೋಕ್ಷವಿಲ್ಲ. ಜ್ಞಾನಕ್ಕೆ ಭಕ್ತಿಯೇ ಕಾರಣವಾದ್ದರಿಂದ, ಸ್ವಾಮಿ, ಭಕ್ತಿಯನ್ನು ನನಗೆ ಅನುಗ್ರಹಿಸು.

೬೮. ಮನುಷ್ಯನಿಗೆ ಕೋಪವೆಂಬುದು ದೇಹದಲ್ಲಿ ನೆಲಸಿದ ಒಂದು ಪಾಪ. ಪಾಪದಿಂದ ನರಕದಲ್ಲಿ ಬೀಳುವುದು ತಪ್ಪದು. ಇದು ಶಾಸ್ತ್ರದಿಂದ ನಿರ್ಣಯಿಸಲ್ಪಟ್ಟಿದೆ. ಯಮನಂತೂ ಪಾಪಿಯನ್ನು ದಂಡಿಸದೆ ಬಿಡುವುದಿಲ್ಲ. ಇದರಲ್ಲಿ ಅವನದೇನೂ ತಪ್ಪಿಲ್ಲ. ಆದ್ದರಿಂದ ನನ್ನ ಕೋಪವನ್ನು ಹೋಗಲಾಡಿಸಿ ಕಾಪಾಡು. ಭಕ್ತವತ್ಸಲನೆಂದು ಈ ನಿನ್ನ ಕೀರ್ತಿಯನ್ನು ಉಳಿಸಿಕೊ.

೬೯. ಸರ್ವವಸ್ತುಗಳಲ್ಲಿಯೂ ಚೇತನಸ್ವರೂಪಿಯಾದ ನೀನು ಸೂತ್ರಧಾರ. ನೀನು ಸೂತ್ರವನ್ನು ಆಡಿಸಿದಂತೆ ಚರಾಚರವಸ್ತುಗಳೆಲ್ಲವೂ ತಮ್ಮ ಕೆಲಸಗಳನ್ನು ಮಾಡುತ್ತವೆ. ಹೀಗಿರುವಾಗ ನಮಗೆ ಯಾವುದರಲ್ಲಿ ಸ್ವಾತಂತ್ರ್ಯ ಉಂಟು ? ಪಾಪಪುಣ್ಯಗಳೆಲ್ಲವೂ ನಿನ್ನದೆಂದು ಸಕಲ ಕರ್ಮಗಳನ್ನು ನಿನಗೆ ಒಪ್ಪಿಸಿದ್ದೇನೆ.

೭೦. ನೀನು ಒಡೆಯನೆಂಬುದನ್ನು ಅರಿತಿದ್ದರೂ ನಿನ್ನನ್ನು ಭಜಿಸದೆ ದುರುಳನಾದೆನು. ಹೆಜ್ಜೆಹೆಜ್ಜೆಗೂ ಮಡದಿ ಮಕ್ಕಳ ವ್ಯಾಮೋಹದಲ್ಲಿ ಮನಸ್ಸು ಸಿಕ್ಕಿಕೊಂಡಿತು. ವಿಚಾರಿಸಿ ನೋಡಿದಾಗ ಈ ಮಡದಿ ಯಾರು, ಮಕ್ಕಳು ಯಾರು ? ಅವರಿಂದ ನನಗೇನಾದೀತು? ಈ ದೇಹದ ಒಡೆಯ ನೀನು. ನನ್ನ ಕೈಹಿಡಿದು ವಾತ್ಸಲ್ಯದಿಂದ ದಾರಿತೋರಿಸಿ ರಕ್ಷಿಸು.

ಪಂಟಿಸಿದ ಮದಮುಖರು ಕೆಲಕೆಲ
ರುಂಟು ರಿಪುಗಳು ದಂಟಿಸುತ ಬಲು
ಕಂಟಕದಿ ಕಾಡುವರು ಕಾಯ್ಕೈ ಕಲುಷಸಂಹಾರ
ಬಂಟನಲ್ಲವೆ ನಾನು ದೀನರ
ನಂಟನಲ್ಲವೆ ನೀನು ನಿನ್ನೊಳ
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ೭೧

ದಂಡಧರನುಪಟಳದಿ ಮಿಗೆ ಮುಂ
ಕೊಂಡು ಮೊರೆಯುಗುವವರ ಕಾಣೆನು
ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ
ಖಂಡಪರಶುವು ರುದ್ರಭೂಮಿಯೊ
ಳಂಡಲೆದು ತಿರುಗುವನು ನೀನು
ದ್ದಂಡ ದೇವರ ದೇವ ರಕ್ಷಿಸು ನಮ್ಮನನವರತ ೭೨

ಶಕ್ತಿಯೆಂಬುದು ಮಾಯೆ ಮಾಯಾ
ಶಕ್ತಿಯದು ತನುವಿನಲಿ ನೀ ನಿಜ
ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು
ಯುಕ್ತಿಯೊಳಗಿದನರಿತು ಮನದ ವಿ
ರಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ೭೩

ಮೂರು ಗುಣ ಮೊಳೆದೋರಿತದರೊಳು
ಮೂರು ಮೂರ್ತಿಗಳಾಗಿ ರಂಜಿಸಿ
ತೋರಿ ಸೃಷ್ಟಿಸ್ಥಿತಿಲಯಂಗಳ ರಚಿಸಿ ವಿಲಯದಲಿ
ಮೂರು ರೂಪೊಂದಾಗಿ ಪ್ರಳಯದ
ವಾರಿಯಲಿ ವಟಪತ್ರಶಯನದಿ
ಸೇರಿದವ ನೀನೀಗ ರಕ್ಷಿಸು ನಮ್ಮನನವರತ ೭೪

ನೀರ ಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ
ಸಾರ ಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ
ತೋರಿಸಚಲಾನಂದಪದವಿಯ
ಸೇರಿಸಕಟಾ ನಿನ್ನವೊಲ್ ನಮ
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ೭೫

೭೧. ಮದ, ಮಾತ್ಸರ್ಯ-ಮೊದಲಾದ ವೈರಿಗಳು ಮುಳ್ಳುಗಳಂತೆ ಅಡ್ಡ ಬಂದು ನನ್ನನ್ನು ಕಾಡುತ್ತಿದ್ದಾರೆ. ಓ ಸ್ವಾಮಿಯೆ-ಪಾಪವಿನಾಶಕನೆ, ನನ್ನನ್ನು ಸಲಹು. ನಾನು ನಿನ್ನ ಬಂಟನಲ್ಲವೆ? ನೀನು ದೀನರ ನೆಂಟನಲ್ಲವೆ? ನಿನ್ನಲ್ಲಿ ನಿಷ್ಕರುಣೆಯುಂಟೆ? ರಕ್ಷಿಸು ನಮ್ಮನನವರತ.

೭೨. ಯಮನ ಉಪಟಳಕ್ಕೆ ಹೆದರಿ ಅದರಿಂದ ತಪ್ಪಿಸಿಕೊಳ್ಳಲು ನಿನಗೆ ಶರಣಾಗತಕ್ಕವರು ಇಲ್ಲವೆಂದು ಕಾಣುತ್ತದೆ. (ಎಲ್ಲರಿಗೂ ಮರಣವು ಸಂಭವಿಸುತ್ತದೆ.) ಬ್ರಹ್ಮನ ಶಿರಸ್ಸನ್ನು ಸಹ ಈಶ್ವರನು ತುಂಡರಿಸಿ ರುದ್ರಭೂಮಿಯಲ್ಲಿ ಸಂಚರಿಸುತ್ತಿದ್ದಾನೆ. ಹೇ ದೇವ ದೇವ, ನಿನಗೆ ಶರಣಾಗತನಾಗಿದ್ದೇನೆ. ಯಮನ ಭಯವಿಲ್ಲದಂತೆ ನನ್ನನ್ನು ಸಲಹು.

ಟಿಪ್ಪಣಿ:- ಬ್ರಹ್ಮನ ಒಂದು ಶಿರಸ್ಸನ್ನು ಈಶ್ವರನು ಕತ್ತರಿಸಿದನೆಂದು ಪುರಾಣ ಕಥೆಯುಂಟು.

೭೩. ಶಕ್ತಿಯೆಂಬ ಪ್ರಕೃತಿಯು ಮಾಯೆ; ಸುಳ್ಳು. ಮುಕ್ತಿದಾಯಕನಾದ ನೀನು ಈ ದೇಹದಲ್ಲಿ ನೆಲೆಸಿರುವಾಗ, ಸುಖದುಃಖಗಳನ್ನು ಕೊಡಲು ಈ ಮಾಯಾಶಕ್ತಿ ಯಾರು? ಇದರಿಂದ ಏನಾದೀತು? ಈ ವಿಷಯವನ್ನು ಯುಕ್ತಿಯಿಂದ ತಿಳಿದು, ಸುಖದುಃಖಗಳಲ್ಲಿ ವೈರಾಗ್ಯದಿಂದ ನಿನ್ನನ್ನು ಭಜಿಸುವವನಿಗೆ ಮುಕ್ತಿ ದೊರೆಯುತ್ತದೆ. ಮುಕ್ತಿಗೆ ಭಕ್ತಿಯೇ ಕಾರಣ.

೭೪. ಸತ್ವ, ರಜಸ್ಸು, ತಮಸ್ಸು-ಎಂಬ ಮೂರು ಗುಣಗಳಿಂದ ವಿಷ್ಣು, ಬ್ರಹ್ಮ ರುದ್ರ-ಎಂಬ ಮೂರು ಮೂರ್ತಿಗಳ ರೂಪವನ್ನು ಧರಿಸಿ ಕ್ರಮವಾಗಿ ಸ್ಥಿತಿ, ಸೃಷ್ಟಿ, ಸಂಹಾರ-ಎಂಬ ಕಾರ್ಯಗಳನ್ನು ನಡೆಸುತ್ತೀಯೆ. ಪ್ರಳಯಕಾಲದಲ್ಲಿ ಮೂರು ಮೂರ್ತಿಗಳೂ ಒಂದಾಗಿ ನಿನ್ನಲ್ಲಿ ಸೇರುತ್ತವೆ. ಆಗ ನೀನು ಆಲದ ಎಲೆಯಲ್ಲಿ ಮಲಗಿ ವಿಶ್ರಮಿಸುತ್ತೀಯೆ.

೭೫. ನೀರಮೇಲಿನ ಗುಳ್ಳೆಯಂತೆ ಈ ದೇಹವು ಸ್ವಲ್ಪ ಕಾಲ ತೋರಿ ಅಡಗುವುದು. ಸಂಸಾರವೆಂಬ ವಿಶಾಲ ಸಮುದ್ರದಲ್ಲಿ ಮುಳುಗಿಹೋಗಿದ್ದೇನೆ. ನನ್ನನ್ನು ಮೇಲೆತ್ತಿ ಸ್ಥಿರವಾದ ಆನಂದಪದವಿಯನ್ನು ತೋರಿಸು. ಅಕಟ! ನಿನ್ನಂತೆ ಆಪದ್ಬಾಂಧವರು ನನಗೆ ಯಾರಿದ್ದಾರೆ?

ಹೊದ್ದಿ ನಿಲುವುದೆ ದರ್ಪಣದ ಮೇ
ಲುದ್ದುರುಳಿ ಬೀಳ್ವಂತೆ ನಿಮಿಷದಿ
ಬಿದ್ದುಹೋಗುವ ಕಾಯವೀ ತನುವೆಂಬ ಪಾಶದಲಿ
ಬದ್ಧನಾದೆನು ಮಮತೆಯಲಿ ನೀ
ನಿರ್ದ್ದಯದಕೆ ಫಲವೇನು ಭಕ್ತಿವಿ
ರುದ್ಧವಾಗದವೋಲು ರಕ್ಷಿಸು ನಮ್ಮನನವರತ ೭೬

ಕೇಳುವುದು ಕಡು ಕಷ್ಟ ಕಷ್ಟದ
ಬಾಳುವೆಯ ಬದುಕೇನು ಸುಡು ಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು
ಬಾಳಬೇಕೆಂಬವಗೆ ನೆರೆ ನಿ
ನ್ನೊಳಿಗವ ಮಿಗೆ ಮಾಡಿ ಭಕ್ತಿಯೊ
ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ ೭೭

ದೇಹಧಾರಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ
ದೇಹವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆ ಮಾತು ರಕ್ಷಿಸು ನಮ್ಮನನವರತ ೭೮

ಅಳಿವ ಒಡಲನು ನೆಚ್ಚಿ ವಿಷಯ
ಗಳಿಗೆ ಕಾತರನಾಗಿ ಮಿಗೆ ಕಳ
ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ
ತಿಳಿದು ಮನದೊಳು ನಿನ್ನ ನಾಮಾ
ವಳಿಯ ಜಿಹ್ವೆಗೆ ತಂದು ಪಾಪವ
ಕಳೆದ ಬದುಕೇ ಲೇಸು ರಕ್ಷಿಸು ನಮ್ಮನನವರತ ೭೯

ವರುಷ ನೂರಾಯುಷ್ಯವದರೊಳ
ಗಿರುಳು ಕಳೆದೈವತ್ತು ಐವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು
ಇರದೆ ಸಂದುದು ಬಳಿಕವಿಪ್ಪ
ತ್ತ್ವರುಷವದರೊಳಗಾದುದಂತಃ
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ೮೦

೨೬. ನುಣುಪಾದ ಕನ್ನಡಿಯ ಮೇಲೆ ಉದ್ದಿನ ಕಾಳನ್ನಿಟ್ಟರೆ ನಿಂತೀತೆ? ಅದು ಉರುಳಿಹೋಗುವಂತೆ ಈ ದೇಹವು ಅಲ್ಪಕಾಲದಲ್ಲಿ ಬಿದ್ದುಹೋಗುವುದು. ದೇಹವೆಂಬ ಈ ಪಾಶದಲ್ಲಿ ಬದ್ಧನಾದೆನು. ನೀನಿರುವುದು ಭಕ್ತರನ್ನು ಉದ್ಧರಿಸುವುದಕ್ಕಲ್ಲವೆ? ಮಮತೆಯಿಂದ ನನ್ನನ್ನು ಸಲಹು.

೨೭. ಇನ್ನೊಬ್ಬರ ಊಳಿಗವನ್ನು ಮಾಡುವುದಾಗಲಿ ಬೇಡುವುದಾಗಲಿ ಬಹಳ ಕಷ್ಟ. ಕಷ್ಟದ ಬಾಳುವೆಯು ಒಂದು ಬದುಕೆ? ಅದನ್ನು ಸುಡಬೇಕು! ಸಂಸಾರದ ಸುಖವೆಂಬುದು ಗಾಳಿಗೊಡ್ಡಿದ ದೀಪ. ಬಾಳಬೇಕೆನ್ನುವವನು ಭಕ್ತಿಯಿಂದ ನಿನ್ನ ಊಳಿಗವನ್ನು ಮಾಡಿ ಬದುಕುವುದು ಉಚಿತ.

೨೮. ಈ ದೇಹವು ಬಂದಿರುವುದರಿಂದಲೇ ಮನುಷ್ಯನು ನಾನಾ ಬಗೆಯ ವ್ಯಾಮೋಹಗಳಿಗೆ ಒಳಗಾಗಿ ವಿಷಯಸುಖಗಳನ್ನು ಬಯಸಿ ಮುಕ್ತಿಯನ್ನು ಪಡೆಯಲು ಅನರ್ಹನಾಗಿರುತ್ತಾನೆ. ಆದ್ದರಿಂದ ಈ ದೇಹವೇ ಸಂಸಾರಬಂಧನ. ಇದನ್ನರಿಯದೆ ಈ ದೇಹವನ್ನು ಮೋಹಿಸತಕ್ಕವನು ಮತಿಗೇಡಿಯೆನ್ನಬೇಕು. ಈತನು ಸಾಹಸಿಯೆಂಬುದು ಸಟೆ.

೨೯. ಒಂದು ದಿನ ಬಿದ್ದುಹೋಗುವ ಈ ಶರೀರವನ್ನು ನೆಚ್ಚಿ ವಿಷಯ ಸುಖಗಳಿಗೆ ಹಾತೊರೆಯುತ್ತ ಕಡೆಯಲ್ಲಿ ಯಮನ ಹಂಗಿಗೆ ಒಳಗಾಗಬೇಕು. ಅದಕ್ಕಿಂತಲೂ ನಿನ್ನ ನಾಮಾವಳಿಯನ್ನು ನಾಲಿಗೆಯಲ್ಲಿ ಹೇಳುತ್ತ ಪಾಪಕರ್ಮಗಳಿಂದ ದೂರವಿದ್ದು ಬದುಕುವುದೇ ಲೇಸು.

೩೦. ಮನುಷ್ಯನಿಗೆ ಹೆಚ್ಚೆಂದರೆ ನೂರು ವರ್ಷ ಆಯಸ್ಸು. ಅದರಲ್ಲಿ ರಾತ್ರಿಯನ್ನು ಕಳೆದರೆ ಐವತ್ತು ವರ್ಷ ಉಳಿಯುತ್ತದೆ. ಅದರಲ್ಲಿ ಬಾಲ್ಯ, ಯೌವನ, ಮುಪ್ಪುಗಳಿಂದ ಮೂವತ್ತು ವರ್ಷಗಳು ಕಳೆದು ಹೋಗುತ್ತವೆ. ಇನ್ನು ಇಪ್ಪತ್ತು ವರ್ಷಗಳಲ್ಲಿ ನಿನ್ನನ್ನು ಭಜಿಸಬೇಕೆಂಬ ಮನಸ್ಸು ಬಂದೀತು! ಈ ಸಮಯದಲ್ಲಾದರೂ ನಿನ್ನಲ್ಲಿ ಭಕ್ತಿಯುಂಟಾಗು ವಂತೆ ಮಾಡಿ ರಕ್ಷಿಸು ನಮ್ಮನನವರತ.

ಊರು ತನಗೊಂದಿಲ್ಲ ಹೊತ್ತ ಶ
ರೀರಗಳ ಮಿತಿಯಿಲ್ಲ ತಾ ಸಂ
ಚಾರಿಸದ ಸ್ಥಳವಿಲ್ಲ ನುಡಿಯದ ಭಾಷೆ ಮತ್ತಿಲ್ಲ
ಬೇರೆ ಹೊಸತೊಂದಿಲ್ಲ ಉಣ್ಣದ
ಸಾರ ವಸ್ತುಗಳಿಲ್ಲ ತನುಸಂ
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ೮೧

ಗೋಪುರದ ಭಾರವನು ಗಾರೆಯ
ರೂಪುದೋರಿದ ಪ್ರತಿಮೆಯಂದದೊ
ಳೀ ಪರಿಯ ಸಂಸಾರಭಾರವನಾರು ತಾಳುವರು
ತಾ ಪರಾಕ್ರಮಿಯೆಂದು ಮನುಜನು
ಕಾಪಥವನಯ್ದುವನು ವಿಶ್ವ
ವ್ಯಾಪಕನು ನೀನಹುದು ರಕ್ಷಿಸು ನಮ್ಮನನವರತ ೮೨

ಬೀಜ ವೃಕ್ಷದೊಳಾಯ್ತು ವೃಕ್ಷಕೆ
ಬೀಜವ್ಯಾರಿಂದಾಯ್ತು ಲೋಕದಿ
ಬೀಜವೃಕ್ಷನ್ಯಾಯವಿದ ಭೇದಿಸುವರ್‍ಯಾರಿನ್ನು
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ
ರಾಜನಂದನನಮಿತ ರಕ್ಷಿಸು ನಮ್ಮನನವರತ ೮೩

ತೊಗಲು ಬೊಂಬೆಗಳಂತೆ ನಾಲಕು
ಬಗೆಯ ನಿರ್ಮಾಣದಲಿ ಇದರೊಳು
ನೆಗಳಿದೀ ಚೌಷಷ್ಟಿ ಲಕ್ಷಣ ಜಾತಿ ಧರ್ಮದಲಿ
ಬಗೆಬಗೆಯ ನಾಮಾಂಕಿತದ ಜೀ
ವಿಗಳದೆಲ್ಲವು ನಿನ್ನ ನಾಮದಿ
ಜಗದಿ ತೋರುತ್ತಿಹುದು ರಕ್ಷಿಸು ನಮ್ಮನನವರತ ೮೪

ಹೂಡಿದೆಲು ಮರಮಟ್ಟು ಮಾಂಸದ
ಗೋಡೆ ಚರ್ಮದ ಹೊದಿಕೆ ನರವಿನ
ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮ ನೀನಿರಲು
ಬೀಡು ತೊಲಗಿದ ಬಳಿಕಲಾ ಸುಡು
ಗಾಡಿನಲಿ ಬೆಂದುರಿವ ಕೊಂಪೆಯ
ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ೮೫

೮೧. ನಾನು ಹೊತ್ತ ನಾನಾಜನ್ಮಗಳನ್ನು ಕುರಿತು ಆಲೋಚಿಸಿದರೆ, ನನಗೆ ಊರೆಂಬುದು ಒಂದಲ್ಲ, ಹೊತ್ತ ಶರೀರಗಳಿಗೆ ಮಿತಿಯಿಲ್ಲ, ನಾನು ಸಂಚರಿಸದಿರುವ ಸ್ಥಳವಿಲ್ಲ. ನುಡಿಯದ ಭಾಷೆ ಇನ್ನೊಂದಿಲ್ಲ. ಹೊಸದೆಂಬುದೇ ಇಲ್ಲ, ಉಣ್ಣದ ಪದಾರ್ಥವಿಲ್ಲ! ದೇಹವನ್ನು ನಂಬಿದ ಬಗೆ ಈ ಪರಿಯಾಯಿತು!

೮೨. ಗಾರೆಯಿಂದ ಮಾಡಿದ ಪ್ರತಿಮೆಯ ಕಂಭವು ಗೋಪುರದ ಭಾರವನ್ನು ಹೊತ್ತು ನಿಂತಿರುವಂತೆ, ನಾನು ಈ ಸಂಸಾರಭಾರವನ್ನು ಹೊತ್ತು ನಿಂತಿರಬೇಕಾಯಿತೆ! ಇದು ಯಾರಿಂದ ಸಾಧ್ಯ? ಮನುಷ್ಯನು ತಾನು ಪರಾಕ್ರಮಿಯೆಂದು ತಿಳಿದು ಈ ಭಾರವನ್ನು ಹೊರುವುದಕ್ಕಾಗಿ ತಪ್ಪುದಾರಿಯನ್ನು ತುಳಿಯುತ್ತಾನೆ. ಹೇ ಸ್ವಾಮಿ, ವಿಶ್ವವ್ಯಾಪಕನಾದ ನೀನು ನನ್ನನ್ನು ಸಲಹಬೇಕು.

೮೩. ಬೀಜವು ಮರದಿಂದ ಹುಟ್ಟುತ್ತದೆ. ಮರವು ಬೀಜದಿಂದ ಹುಟ್ಟುತ್ತದೆ. ಇವುಗಳಲ್ಲಿ ಯಾವುದು ಮೊದಲು-ಎಂಬ ಬೀಜವೃಕ್ಷನ್ಯಾಯಕ್ಕೆ ಉತ್ತರ ಹೇಳತಕ್ಕವರು ಯಾರು? ಹಾಗೆಯೇ ಈ ಸಂಸಾರಕ್ಕೆ ಮೂಲ ಯಾವುದು-ಎಂಬುದನ್ನು ಯಾರು ಹೇಳಬಲ್ಲರು? ಇದರ ಚಮತ್ಕಾರವನ್ನು ನೀನೇ ಬಲ್ಲೆ. ಎಲ್ಲವೂ ನಿನ್ನ ಲೀಲೆಯಿಂದ ನಡೆಯುವುದು. ದೇವೇಂದ್ರನ ಮಗನಿಂದಲೂ ವಂದಿತನಾದವನು ನೀನು.

೮೪. ಮುಖ್ಯವಾಗಿ ನಾಲ್ಕು ಭೇದಗಳುಳ್ಳ ಪ್ರಾಣಿಗಳು ಅರವತ್ತು ನಾಲ್ಕು ಒಳಬೇಧಗಳಿಂದ ತೊಗಲುಬೊಂಬೆಗಳಂತೆ ಲೋಕದಲ್ಲಿ ಆಡುತ್ತಿವೆ! ಬಗೆಬಗೆಯ ಹೆಸರುಗಳಿಂದ ಬೊಂಬೆಗಳಿಗೆ ನಾಮಕರಣ ಮಾಡಿದವನು ನೀನೇ! ನಿನ್ನ ಇಚ್ಛೆಯಂತೆ ಇವು ಜಗತ್ತಿನಲ್ಲಿ ಕಾಣಿಸಿಕೊಳ್ಳುತ್ತವೆ.

ಟಿಪ್ಪಣಿ:- ಜರಾಯುಜ (ಗರ್ಭದ ಚೀಲದಿಂದ ಹೊರಬರುವ ಮನುಷ್ಯ ಮೊದಲಾದವರು), ಅಂಡಜ (ಮೊಟ್ಟೆಯಿಂದ ಹೊರಬರುವ ಹಕ್ಕಿ-), ಸ್ವೇದಜ (ಬೇವರಿನಿಂದ ಜನಿಸುವ ಹೇನು-), ಉದ್ಭಿಜ (ಸಸ್ಯಜಾತಿ)-ಇವು ನಾಲ್ಕು ಭೇದಗಳು. ಒಳಭೇದವು ಎಂಬತ್ತು ನಾಲ್ಕು ಲಕ್ಷವೆಂದು ಹೇಳಿಕೆ ಇದೆ. ಚೌಷಷ್ಟಿ-ಅರುವತ್ತು ನಾಲ್ಕು. ಲೆಕ್ಕವಿಲ್ಲದಷ್ಟು ಎಂದು ತಾತ್ಪರ್ಯ.

೮೫. ಈ ದೇಹವೆಂಬ ಮನೆಗೆ ಎಲುಬುಗಳೇ ಮರದ ಸಾಮಾನು; ಮಾಂಸದ ಗೋಡೆ; ಚರ್ಮದ ಹೊದಿಕೆ; ನರಗಳಿಂದ ಬಿಗಿದು ಕಟ್ಟಿದ ಒಂದು ಮುದ್ದೆ ಇದು. ಆತ್ಮನಾದ ನೀನು ಇಲ್ಲಿ ಇರುವವರೆಗೆ ಇದು ಒಂದು ಮನೆ. ನೀನು ಇಲ್ಲಿಂದ ಹೊರಟೊಡನೆ ಇದು ಸುಡುಗಾಡಿನಲ್ಲಿ ಬೆಂದು ಉರಿದುಹೋಗುವ ಕೊಂಪೆ! ಇದನ್ನು ನಂಬಿರಬಹುದೆ?

ಬೀಗಮುದ್ರೆಗಳಿಲ್ಲದೂರಿಗೆ
ಬಾಗಿಲುಗಳೊಂಭತ್ತು ಹಗಲಿರು
ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ
ನೀಗಿಯೆಲ್ಲವ ಬಿಸುಟು ಬೇಗದಿ
ಹೋಗುತಿಹ ಸಮಯದಲಿ ಇವರವ
ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ ೮೬

ಕೀಲು ಬಲಿದಿಹುದೈದು ತಿರುಗುವ
ಗಾಲಿಯೆರಡರ ರಥಕೆ ತ್ರೈಗುಣ
ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ
ಕೀಲು ಕಡೆಗೊಂದೂಡಿ ಬೀಳಲು
ಕಾಲಗತಿ ತಪ್ಪುವುದು ಅದರನು
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ೮೭

ಬಿಗಿದ ರಕುತದ ರೋಮಕೂಪದ
ತೊಗಲ ಕೋಟೆಯ ನಂಬಿ ರೋಗಾ
ದಿಗಳ ಮುತ್ತಿಗೆ ಬಲಿದು ಜೀವನ ಪಿಡಿಯಲನುವಾಯ್ತು
ವಿಗಡ ಯಮನಾಳುಗಳು ಬರುತಿರೆ
ತೆಗೆಸು ಕಾಲನ ಬಲವ ಬಲು ಮು
ತ್ತಿಗೆಯನಿದ ಪರಿಹರಿಸಿ ರಕ್ಷಿಸು ನಮ್ಮನನವರತ ೮೮

ವಾರಣಗಳೆಂಟೆಸೆವ ಮನೆಗೆ
ದ್ವಾರವೊಂಭತ್ತದಕೆ ಬಲು ಮೊನೆ
ಗಾರರಾದಾಳುಗಳ ಕಾವಲುಗಾರರನು ಮಾಡಿ
ಆರರಿಯದಂತದರೊಳಗೆ ಹೃದ
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ೮೯

ಪೇಳಲೆನ್ನಳವಲ್ಲವೀಗೆಮ
ನಾಳುಗಳು ನೆರೆಯಂಗದೇಶವ
ಧಾಳಿ ಮಾಡುವರಕಟಕಟ ಸೆರೆಸೂರೆಗಳ ಪಿಡಿದು
ಕಾಳು ಮಾಡುವರಿನ್ನು ತನುವಿದು
ಬಾಳಲರಿಯದು ಕೋಟೆಯವರಿಗೆ
ಕೋಳುಹೋಗದ ಮುನ್ನ ರಕ್ಷಿಸು ನಮ್ಮನನವರತ ೯೦

೮೬. ದೇಹವೆಂಬುದು ಬೀಗ ಮುದ್ರೆಗಳಿಲ್ಲದ ಒಂದು ಊರು. ಇದಕ್ಕೆ ಒಂಬತ್ತು ಬಾಗಿಲುಗಳು. ಹಗಲು ರಾತ್ರಿಯೆನ್ನದೆ ಈ ಬಾಗಿಲುಗಳು ತೆರೆದಿರುತ್ತವೆ. ಜೀವಾತ್ಮನು ಇಲ್ಲಿ ಇರುವವರೆಗೆ ಇದಕ್ಕೆ ರಕ್ಷಣೆ ಇರಬಹುದು. ಅವನು ಇದೆಲ್ಲವನ್ನೂ ಬಿಟ್ಟು ಹೊರಟಾಗ, ಅವರು ಇವರು ಎಂದು ಯಾವ ನೆಂಟರು ಇದನ್ನು ಉಳಿಸಿಯಾರು? ಸ್ವಾಮಿ, ರಕ್ಷಿಸು ನಮ್ಮನನವರತ.

ಟಿಪ್ಪಣಿ:- ಕಿವಿ, ಕಣ್ಣು ಮುಂತಾದ ಒಂಬತ್ತು ರಂಧ್ರಗಳೇ ಬಾಗಿಲುಗಳು.

೮೭. ಈ ಶರೀರವೆಂಬುದು ಐದು ಕೀಲುಗಳಿರುವ ಒಂದು ರಥ. ಇದಕ್ಕೆ ಎರಡು ಗಾಲಿಗಳಿವೆ. ಇದರಲ್ಲಿ ತ್ರಿಗುಣಾತ್ಮಕನಾದ ಜೀವನು ರಥಿಕನಾಗಿ ಸಂಚರಿಸುತ್ತಿದ್ದಾನೆ. ಇದರಲ್ಲಿ ಒಂದು ಕೀಲುತಪ್ಪಿದರೂ ರಥವು ನಡೆಯಲಾರದೆ ಬೀಳುವುದು. ಇದನ್ನು ಸರಿಯಾಗಿ ನಡೆಸುವ ಸಾಮರ್ಥ್ಯ ನಿನ್ನಲ್ಲಿದೆ.

ಟಿಪ್ಪಣಿ:- ಐದು ಕೀಲುಗಳು-ಪಂಚಭೂತಗಳು ಅಥವಾ ಜ್ಞಾನೇಂದ್ರಿಯಗಳು ಅಥವಾ ಕರ್ಮೇಂದ್ರಿಯಗಳು. ಎರಡು ಗಾಲಿಗಳು-ಜ್ಞಾನ ಮತ್ತು ಕರ್ಮ: ಎರಡು ಕಾಲುಗಳೇ ಗಾಲಿಗಳೆಂದೂ ಹೇಳಬಹುದು. ತ್ರಿಗುಣ-ಸತ್ವ, ರಜಸ್ಸು, ತಮಸ್ಸು.

೮೮. ರಕ್ತ, ರೋಮ, ಚರ್ಮ-ಇವುಗಳ ಕೋಟೆಯಿದೆಯೆಂದು ಜೀವನು ನಂಬಿ ದೇಹದಲ್ಲಿ ವಾಸಿಸುತ್ತಿದ್ದಾನೆ. ಆದರೆ ಈ ಕೋಟೆಗೆ ರೋಗರುಜಿನಗಳು ಲಗ್ಗೆಯನ್ನು ಹಾಕಿ ಮುತ್ತುವುವು. ವೀರರಾದ ಯಮದೂತರು ಜೀವನನ್ನು ಹಿಡಿದೊಯ್ಯಲು ನುಗ್ಗುತ್ತಿದ್ದಾರೆ. ಓ ಸ್ವಾಮಿಯೆ, ಈ ಮುತ್ತಿಗೆಯನ್ನು ತಪ್ಪಿಸಿ ಯಮದೂತರನ್ನು ತಡೆದು ನನ್ನನ್ನು ಸಲಹು.

೮೯. ಈ ದೇಹವೆಂಬ ಮನೆಗೆ ಪಂಚಭೂತಗಳು, ಮನಸ್ಸು, ಬುದ್ಧಿ, ಅಹಂಕಾರ-ಎಂಬ ಎಂಟು ಪ್ರಕೃತಿಗಳನ್ನು ಆನೆಗಳಂತೆ ರಕ್ಷಣೆಗಾಗಿ ನಿಯಮಿಸಿ ಕೊಂಡಿದ್ದೀಯೆ. ಈ ಮನೆಯಲ್ಲಿ ಒಂಬತ್ತು ದ್ವಾರಗಳುಂಟು. ಬಹಳ ಎಚ್ಚರದಿಂದಿರುವ ಇಂದ್ರಿಯಗಳನ್ನು ಕಾವಲುಗಾರರನ್ನಾಗಿ ನೇಮಿಸಿ, ಹೃದಯಕಮಲದ ಮಧ್ಯದಲ್ಲಿ ಯಾರಿಗೂ ತಿಳಿಯದಂತೆ ನೆಲೆಸಿದ್ದೀಯೆ. ಹೀಗಿರುವಾಗ ನಿನಗೆ ತಿಳಿಯದಂತೆ ಯಾವ ಕೆಲಸವನ್ನು ಜೀವನು ಮಾಡಲು ಸಾಧ್ಯ? ಬರಿಯ ದೂರನ್ನು ಜೀವಾತ್ಮನ ಮೇಲೆ ಹೊರಿಸಬಹುದೆ?

೯೦. ಹೇಳಲು ನನಗೆ ಶಕ್ತಿ ಸಾಲದು. ಯಮನ ಆಳುಗಳು ಈ ಅಂಗದೇಶದ (ದೇಹ) ಮೇಲೆ ದಾಳಿ ಮಾಡುವರು. ಅಕಟಕಟ! ಸಿಕ್ಕಿದುದನ್ನು ಹಿರಿದು ಸೂರೆ ಮಾಡುವರು. ಕೋಟೆಯಲ್ಲಿರುವವರಿಗೆ ಇದನ್ನು ರಕ್ಷಿಸಿಕೊಳ್ಳಲು ಸಾಧ್ಯವಿಲ್ಲ. ದೇಹವು ಇನ್ನು ಬಾಳಲಾರದು. ಸರ್ವನಾಶವಾಗುವುದರೊಳಗೆ ಕಾಪಾಡು.

ನಾಲಿಗೆಯು ನಾಸಿಕವು ನಯನ ಕ
ಪಾಲ ಪದ ಪಾಣಿಗಳು ತನುವಿನ
ಮೂಲಕರ್ತುವಿನಲ್ಲಿ ಪರಿಚಾರಕರು ತಾವಾಗಿ
ಲೀಲೆಯಿಂದಿರುತಿರ್ದು ಕಡೆಯಲಿ
ಕಾಲ ತೀರಿದ ಬಳಿಕಲದರನು
ಕೂಲ ನಿನ್ನೊಳಗಹುದು ರಕ್ಷಿಸು ನಮ್ಮನನವರತ ೯೧

ಸತ್ತವರಿಗಳಲೇಕೆ ತನ್ನನು
ಹೊತ್ತವರು ಪೆತ್ತವರುಗಳು ತಾ
ಸತ್ತು ಹೋಗುವರಲ್ಲದುಳಿವರೆ ಮರುಗಲೇಕಿನ್ನು
ಮೃತ್ಯು ಬೆನ್ನಿನೊಳಿಹುದು ತಾವಿ
ನ್ನುತ್ತು ಮಾಡುವುದೇನು ಪೂರ್ವದ
ತೆತ್ತಿಗನು ನೀನೀಗ ರಕ್ಷಿಸು ನಮ್ಮನನವರತ ೯೨

ಮಣ್ಣು ಮಣ್ಣನೊಳುದಿಸಲದರಲಿ
ಮಣ್ಣು ಬೊಂಬೆಗಳಾಗಿ ರಂಜಿಸಿ
ಮಣ್ಣನಾಹಾರದಲಿ ಜೀವವ ಹೊರೆದು ಉಪಚರಿಸಿ
ಮಣ್ಣನಲಿ ಬಂಧಿಸಿದ ದೇಹವ
ಮಣ್ಣುಗೂಡಿಸಬೇಡ ಜ್ಞಾನದ
ಕಣ್ಣ ದೃಷ್ಟಿಯನ್ನಿಟ್ಟು ರಕ್ಷಿಸು ನಮ್ಮನನವರತ ೯೩

ಬೀಯವಾಗುವ ತನುವಿನಲಿ ನಿ
ರ್ದಾಯಕನು ನೀನಿರ್ದು ಅತಿ ಹಿರಿ
ದಾಯಸಂಬಡಿಸುವರೆ ನೀನನುಕೂಲವಾಗಿರ್ದು
ತಾಯನಗಲಿದ ಶಿಶುವಿನಂದದಿ
ಬಾಯಿಬಿಡುವಂತಾಯ್ತೆ ಚಿಂತಾ
ದಾಯಕನೆ ಬಿಡಬೇಡ ರಕ್ಷಿಸು ನಮ್ಮನನವರತ ೯೪

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆ ನಾ ಮ
ಧ್ಯದಲಿ ನೆರೆ ನಾ ನಿಪುಣನೆಂಬುದು ಬಳಿಕ ನಗೆಗೇಡು
ಮೊದಲು ಕಡೆ ಮಧ್ಯಗಳ ಬಲ್ಲವ
ಮದನಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ೯೫

೯೧. ನಾಲಿಗೆ, ಮೂಗು, ಕಣ್ಣು, ತಲೆ, ಕಾಲು, ಕೈ ಮೊದಲಾದವು ಈ ದೇಹವನ್ನು ನಿರ್ಮಿಸಿದ ನಿನ್ನ ಪರಿಚಾರಕರಾಗಿ ಲೀಲೆಯಿಂದ ಕೆಲಸಮಾಡುತ್ತಿರಲಿ; ಆಯಸ್ಸು ತೀರಿದ ಮೇಲೆ ಕಡೆಯಲ್ಲಿ ಅವುಗಳಿಂದ ಹೇಗೆ ಸೇವೆಯನ್ನು ತೆಗೆದುಕೊಳ್ಳಬೇಕೆಂಬುದು ನಿನಗೆ ಸೇರಿದ್ದು.

೯೨. ಸತ್ತವರಿಗಾಗಿ ಅಳುವುದೇಕೆ? ತನ್ನನ್ನು ಹೆತ್ತವರು ಹೊತ್ತವರುಗಳೆಲ್ಲರೂ ಒಂದು ದಿನ ಸತ್ತುಹೋಗದೆ ಉಳಿಯವರೆ? ಮೃತ್ಯು ಬೆನ್ನಿನ ಮೇಲೆ ಹತ್ತಿ ಕುಳಿತಿರುವಾಗ ಅತ್ತರೆ ಆಗುವುದೇನು? ಹಳೆಯ ಸಾಲಗಾರನು ಸಾಲವನ್ನು ತೀರಿಸಲೇ ಬೇಕು. ಅವನು ಅತ್ತರೆ ಏನಾದೀತು? ರಕ್ಷಿಸು ನಮ್ಮನನವರತ.

೯೩. ಮಣ್ಣು ಮಣ್ಣಿನಲ್ಲಿ ಸೇರಿ ಈ ಮಣ್ಣಿನ ಶರೀರ ಹುಟ್ಟಿದೆ. ಈ ಮಣ್ಣು ಗೊಂಬೆಗಳಿಗೆ ಮಣ್ಣಿನ ಆಹಾರವನ್ನು ಕೊಟ್ಟು ಉಪಚರಿಸಿ ಬೆಳೆಸಲಾಗಿದೆ. ಮಣ್ಣಿನಲ್ಲಿ ಬೆಳೆಸಿದ ಈ ಮಣ್ಣಿನ ದೇಹವನ್ನು ವ್ಯರ್ಥವಾಗಿ ಮತ್ತೆ ಮಣ್ಣುಗೂಡಿಸಬೇಡ! ಓ ಸ್ವಾಮಿಯೆ, ಜ್ಞಾನದ ಕಣ್ಣನ್ನು ಕೊಟ್ಟು ರಕ್ಷಿಸು ನಮ್ಮನನವರತ.

೯೪. ಬಿದ್ದುಹೋಗುವ ಈ ದೇಹದಲ್ಲಿ ಇದನ್ನು ಕೊಟ್ಟು ನೀನೇ ವಾಸವಾಗಿದ್ದೀಯೆ. ಆದರೂ ನನಗೆ ಇಷ್ಟು ಆಯಾಸವನ್ನು ಕೊಡಬಹುದೆ? ತಾಯಿಯನ್ನಗಲಿದ ಶಿಶುವಿನಂತೆ ನಾನು ಬಾಯಿ ಬಿಡುವಂತಾಯಿತೆ? ಈ ಚಿಂತೆಗಳನ್ನು ನೀನೇ ಕೊಡುವೆಯಾ? ಕೈಬಿಡಬೇಡ. ಅನುಕೂಲನಾಗಿದ್ದು ನನ್ನನ್ನು ಸಲಹು.

೯೫. ಮೊದಲು ಹುಟ್ಟುವುದರ ರೂಪವನ್ನರಿಯೆನು. ಕಡೆಗೆ ಸಾಯುವುದರ ಗುಟ್ಟನ್ನು ತಿಳಿಯೆನು. ಹೀಗಿರುವಾಗ ನಾನೇ ನಿಪುಣನೆಂದು ಮಧ್ಯದಲ್ಲಿ ಹೇಳಿಕೊಳ್ಳುವುದು ನಗೆಗೇಡು. ಮೊದಲು ಕಡೆ ಮಧ್ಯಗಳನ್ನು ಬಲ್ಲವನು ನೀನೊಬ್ಬನೇ. ಓ ಮದನಜನಕ, ನಿನ್ನ ಪಾದಗಳನ್ನು ಸೇರಿಕೊಳ್ಳಲು ಬಯಸುವೆನು.

ಸಾರವಿಲ್ಲದ ದೇಹವಿದು ನಿ
ಸ್ಸಾರವಾಗಿಹ ತನುವಿನಲಿ ಸಂ
ಚಾರಿಯಹ ನೀನಿರ್ದು ಕಡೆಯಲಿ ತೊಲಗಿ ಹೋಗುತಲಿ
ದೂರ ತಪ್ಪಿಸಿಕೊಂಡು ಬರಿಯಪ
ದೂರ ಹೊರಿಸಿದ ಜೀವನಲಿ ಇದ
ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ೯೬

ಅಂಡವೆರಡುದ್ಭವಿಸಿದವು ಬ್ರ
ಹ್ಮಾಂಡವದರೋಪಾದಿಯಲಿ ಪಿಂ
ಡಾಂಡವೆಸೆದುದು ಸ್ಥೂಲ ಕಾರಣ ಸೂಕ್ಷ್ಮತನುವಿನಲಿ
ಅಂಡ ನಿನ್ನಯ ರೋಮಕೂಪದೊ
ಳಂಡಲೆದವಖಿಳಾಂಡವಿದು ಬ್ರ
ಹ್ಮಾಂಡನಾಯಕ ನೀನು ರಕ್ಷಿಸು ನಮ್ಮನನವರತ ೯೭

ಒಂದು ದಿನ ತನುವಿನಲಿ ನಡೆವುದು
ಇಂದು ಭಾಸ್ಕರ ಸ್ವರಗಳಿಪ್ಪ
ತ್ತೊಂದುಸಾವಿರದಾರುನೂರನು ಏಳು ಭಾಗದಲಿ
ಬಂದುದನು ಉಡುಚಕ್ರದಲ್ಲಿಗೆ
ತಂದು ಧಾರೆಯನೆರೆದ ಮುನಿಕುಲ
ವೃಂದಹೃದಯನು ನೀನು ರಕ್ಷಿಸು ನಮ್ಮನನವರತ ೯೮

ತೊಲಗುವರು ಕಡೆಕಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು
ಗಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸವೀ ದೇಹದೊಳು ನೀ
ನೆಲೆಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ೯೯

ಬರಿದಹಂಕಾರದಲಿ ತತ್ತ್ವದ
ಕುರುಹ ಕಾಣದೆ ನಿನ್ನ ದಾಸರ
ಜರಿದು ವೇದ ಪುರಾಣ ಶಾಸ್ತ್ರಗಳೋದಿ ಫಲವೇನು
ನರರು ದುಷ್ಕರ್ಮದಲಿ ಮಾಡಿದ
ದುರಿತವಡಗಲು ನಿನ್ನ ನಾಮ
ಸ್ಮರಣೆಯೊಂದೇ ಸಾಕು ರಕ್ಷಿಸು ನಮ್ಮನನವರತ ೧೦೦

೯೬. ನಿಸ್ಸಾರವಾದ ಈ ದೇಹದಲ್ಲಿ ಸಂಚಾರಿಯಾಗಿ ನೀನು ನೆಲೆಸಿದ್ದು ಕಡೆಗೆ ಒಮ್ಮೆಯೇ ಬಿಟ್ಟು ಹೋಗಿ ಬಿಡುವೆಯಲ್ಲ! ಎಲ್ಲ ದೂರನ್ನೂ ತಪ್ಪಿಸಿಕೊಂಡು ಅಪವಾದವನ್ನು ನನ್ನೊಬ್ಬನ ಮೇಲೆ ಹೊರಿಸಿ ಬಿಡುವೆಯಲ್ಲ! ಅಕಟ! ಇದನ್ನು ಯಾರು ಮೆಚ್ಚುವರು? ರಕ್ಷಿಸು ನಮ್ಮನನವರತ.

೯೭. ಬ್ರಹ್ಮಾಂಡ, ಪಿಂಡಾಂಡ-ಎಂದು ಎರಡು ಅಂಡಗಳು ನಿನ್ನಿಂದ ಹುಟ್ಟಿದವು. ಈ ದೇಹವೇ? ಪಿಂಡಾಂಡ. ಇದರಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಭೇದಗಳಾದವು. ಹೇ ದೇವ, ನಿನ್ನ ಒಂದೊಂದು ರೋಮಕೂಪದಲ್ಲಿ ಇಂತಹ ಅಷ್ಟು ಅಂಡಗಳು ಅಂಡಲೆದವೊ! ಹೇ ಬ್ರಹ್ಮಾಂಡನಾಯಕ, ನಮ್ಮನ್ನು ಸಲಹು.

ಟಿಪ್ಪಣಿ:- ಸ್ಥೂಲದೇಹ = ಹೊರಗೆ ಕಾಣಿಸುವ ಸ್ಥೂಲವಾದ ದೇಹ. ಸೂಕ್ಷ್ಮದೇಹ = ಜ್ಞಾನೇಂದ್ರಿಯ ಕರ್ಮೇಂದ್ರಿಯ ಪಂಚವಾಯುಗಳು ಮತ್ತು ಅಂತಃಕರಣ. ಕಾರಣದೇಹ = ಅಜ್ಞಾನ.

೯೮. ಒಂದು ದಿನದಲ್ಲಿ ಸೂರ್ಯನಾಡಿ ಚಂದ್ರನಾಡಿಗಳ ಮೂಲಕ ೨೧೬೦೦ ಉಸಿರಾಟಗಳು ನಡೆಯುತ್ತವೆ. ಇವನ್ನು ಹಂಸಮಂತ್ರದ ಅಜಪಾ ಗಾಯತ್ರಿಯ ಜಪವನ್ನಾಗಿ ಭಾವಿಸಿ, ಮೂಲಾಧಾರ-ಮುಂತಾದ ಏಳು ಚಕ್ರಗಳಲ್ಲಿ ವಿಭಾಗಿಸಿ, ಅವೆಲ್ಲವನ್ನೂ ಉಡುಚಕ್ರದಲ್ಲಿ ಧಾರೆಯೆರೆಯುವ ಯಾವ ಯೋಗಿಗಳಿದ್ದಾರೋ ಅವರ ಹೃದಯದಲ್ಲಿ ನೆಲೆಸಿರುವ ನೀನು ರಕ್ಷಿಸು ನಮ್ಮನನವರತ.

ಟಿಪ್ಪಣಿ:- ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ, ಆಜ್ಞಾ, ಸಹಸ್ರಾರ-ಇವು ಏಳು ಚಕ್ರಗಳು. ಆಜ್ಞಾಚಕ್ರವು ತಾರಕಸ್ಥಾನದಲ್ಲಿದೆ. ಉಡು ಎಂದರೆ ತಾರಕ (ನಕ್ಷತ್ರ). ಆದ್ದರಿಂದ ಆಜ್ಞಾಚಕ್ರವನ್ನು ಉಡುಚಕ್ರ ಎಂದು ಕರೆದಿರಬಹುದಾಗಿ ತೋರುತ್ತದೆ.

೯೯. 'ಹೊಲೆಯ, ಹೊಲೆಯ' ಎನ್ನುತ್ತ ಜನರು ಕಳವಳಿಸಿ ದೂರ ದೂರ ಸರಿಯುವರು. ತಾವೆಲ್ಲರೂ ಮೂತ್ರದ ಬಿಲದಿಂದ ಬಂದವರೆಂಬುದನ್ನು ಕಾಣರು! ನೀರಲ್ಲಿ ಮುಳುಗಿದರೆ ಹೊಲೆಯು ತೊಲಗುವುದೆ? ಈ ದೇಹದಲ್ಲಿ ನೀನು ನೆಲೆಸಿರುವಾಗ ಹೊಲೆಯೆಂಬುದುಂಟೆ? ರಕ್ಷಿಸು ನಮ್ಮನನವರತ.

೧೦೦. ವೇದ ಶಾಸ್ತ್ರ ಪುರಾಣಗಳನ್ನೋದಿದರೂ ಸತ್ಯದ ಸ್ವರೂಪವನ್ನು ಮನಗಾಣದಿದ್ದ ಮೇಲೆ ಪ್ರಯೋಜನವೇನು? ಅಹಂಕಾರದಿಂದ ನಿನ್ನ ದಾಸರನ್ನು ಜರಿದರೆ ಆಗುವುದೇನು? ದುಷ್ಕರ್ಮಗಳಿಂದಾದ ಪಾಪವು ನಾಶವಾಗಲು ನಿನ್ನ ನಾಮಸ್ಮರಣೆಯೊಂದೇ ಸಾಕು.

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನಿಸಿರದೆ
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ೧೦೧

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ
ಊಳಿಗವ ಮಾಡುವುದು ವಿಷಯವ
ಹೂಳುವುದು ನಿಜ ಮುಕ್ತಿಕಾಂತೆಯ
ನಾಳುವುದು ಕೃಪೆ ಮಾಡಿ ರಕ್ಷಿಸು ನಮ್ಮನನವರತ ೧೦೨

ಈ ತೆರದೊಳಚ್ಯುತನ ನಾಮವ
ನೂತನದಿ ವಸುಧಾತಳದಿ ವಿ
ಖ್ಯಾತಿ ಬಯಸದೆ ಬಣ್ಣಿಸಿದೆ ಭಾಮಿನಿಯ ವೃತ್ತದಲಿ
ನೀತಿಕೋವಿದರಾಲಿಸುವರತಿ
ಪ್ರೀತಿಯಲಿ ಕೇಳ್ದರಿಗೆಯಸುರಾ
ರಾತಿ ಚೆನ್ನಿಗರಾಯ ಸುಖಗಳನೀವನನವರತ ೧೦೩

ಬಾದರಾಯಣ ಪೇಳ್ದ ಭಾರತ
ಕಾದಿಕರ್ತನುದಾರ ಶ್ರೀಪುರ
ದಾದಿಕೇಶವಮೂರ್ತಿಗಂಕಿತವಾದ ಚರಿತೆಯನು
ಮೇದಿನಿಯೊಳಿದನಾರು ಹೃದಯದೊ
ಳಾದರಿಸಿ ಕೇಳ್ದಪರು ಮುದದಲಿ
ಯಾದಿಮೂರುತಿ ವರಪುರಾಧಿಪನೊಲಿವನನರತ ೧೦೪

ಕುಲಗಿರಿಗಳನ್ವಯವ ಧಾರಿಣಿ
ಜಲಧಿ ಪಾವಕ ಮರುತ ಜಲ ನಭ
ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತ
ಚಲನೆಯಿಲ್ಲದ ನಿನ್ನ ಚರಿತೆಯು
ಒಲಿದು ಧರೆಯೊಳಗೊಪ್ಪುವಂದದಿ
ಚೆಲುವ ಚೆನ್ನಿಗರಾಯ ರಕ್ಷಿಸು ನಮ್ಮನನವರತ ೧೦೫

೧೦೧. 'ಎಂಜಲು, ಎಂಜಲು' ಎಂದು ಆಡಿಕೊಳ್ಳುವರಲ್ಲ, ಎಂಜಲು ಎಂಬ ನುಡಿಯೇ ಎಂಜಲಲ್ಲವೆ? ನೀರು ಜಲಜಂತುಗಳ ಎಂಜಲಲ್ಲವೆ? ಹಾಲು ಕರುವಿನ ಎಂಜಲಲ್ಲವೆ? ವಿಚಾರಿಸಿ ನೋಡಿದಲ್ಲಿ ಯಾವುದು ಎಂಜಲಲ್ಲ? ದೇವ, ರಕ್ಷಿಸು ನಮ್ಮನನವರತ.

ತಾತ್ಪರ್ಯ:- ಇನ್ನೊಬ್ಬರು ಅನುಭವಿಸಿ ಬಿಟ್ಟದ್ದು ಎಂಜಲು. ನಾವು ಅನುಭವಿಸುವ ಸಕಲ ಪದಾರ್ಥವೂ ಇನ್ನೊಬ್ಬರು ಹಿಂದೆ ಅನುಭವಿಸಿದ್ದೇ ಸರಿ. ಸ್ವತಂತ್ರವಾಗಿ ನಮಗೋಸ್ಕರ ಮೀಸಲಾದ ಹೊಸದು ಯಾವುದೂ ಇಲ್ಲ.

೧೦೨. ಜನರು ಶ್ರೀಹರಿಯ ಚರಿತೆಯನ್ನು ಕೇಳುತ್ತಿರಬೇಕು. ಕೇಳುವಂತೆ ಇತರರಿಗೆ ಹೇಳುತ್ತಿರಬೇಕು. ಮನಸ್ಸಿನಲ್ಲಿ ಭಕ್ತಿಯಿಂದ ಭಗವಂತನನ್ನು ಧ್ಯಾನಿಸುತ್ತಿರಬೇಕು. ಶ್ರೀಹರಿಯ ಸೇವೆಯೆಂದು ಊಳಿಗವನ್ನು ಮಾಡುತ್ತಿರಬೇಕು. ವಿಷಯಸುಖವನ್ನು ಹೂಳಿ, ಮುಕ್ತಿಯೆಂಬ ಕಾಂತೆಯನ್ನು ಒಲಿಸಿಕೊಳ್ಳಬೇಕು.

೧೦೩. ಈ ಪರಿಯನ್ನು ಅಚ್ಯುತನ ನಾಮಾವಳಿಯ ಮಹಿಮೆಯು ವಿಖ್ಯಾತವಾಗುವಂತೆ ಹೊಸ ರೀತಿಯಿಂದ ಬಣ್ಣಿಸಲಾಯಿತು. ಇದು ಕನ್ನಡದ ಭಾಮಿನಿ ಷಟ್ಪದಿಯಲ್ಲಿದೆ. ನೀತಿವಂತರು ಇದನ್ನು ಪ್ರೀತಿಯಿಂದ ಕೇಳಲಿ. ಅಸುರಾರಿಯಾದ ನಮ್ಮ ಚೆನ್ನಕೇಶವನು ಇದನ್ನು ಕೇಳಿದವರಿಗೆ ಸದಾ ಸುಖವನ್ನೀಯುವನು.

೧೦೪. ವ್ಯಾಸಮುನಿಗಳು ಹೇಳಿದ ಭಾರತಕಥೆಗೆ ಆದಿಕರ್ತನೂ ಉದಾರಿಯೂ ಆದ ಶ್ರೀಕೃಷ್ಣನಿಗೆ ಈ ಹರಿಭಕ್ತಿಸಾರವು ಅಂಕಿತವಾಗಿದೆ. ಇದನ್ನು ಹೃತ್ಪೂರ್ವಕವಾಗಿ ಆದರಿಸಿ ಸಂತೋಷದಿಂದ ಕೇಳತಕ್ಕವರಿಗೆ, ಆದಿಮೂರ್ತಿಯೂ ಬೇಲೂರಿನ ಅಧಿಪತಿಯೂ ಆದ ಚೆನ್ನಕೇಶವನು ಒಲಿಯುತ್ತಾನೆ.

೧೦೫. ಹೇ ಚೆನ್ನಿಗರಾಯ, ಏಳು ಕುಲಪರ್ವತಗಳೂ ಭೂಮಿ ಸಮುದ್ರ ಅಗ್ನಿ ವಾಯು ನೀರು ಆಕಾಶ ಸೂರ್ಯ ಚಂದ್ರ ನಕ್ಷತ್ರಗಳು ಇರುವವರೆಗೂ ನಿನ್ನ ಚರಿತೆಯು ಲೋಕದಲ್ಲಿ ಮೆರೆಯುವಂತೆ ಅನುಗ್ರಹಿಸಿ ರಕ್ಷಿಸು ನಮ್ಮನನವರತ.

ಟಿಪ್ಪಣಿ:- ಕುಲಪರ್ವತಗಳು = ಮಹೇಂದ್ರ, ಮಲಯ, ಶಕ್ತಿಮಾನ್, ಋಕ್ಷ, ಸಹ್ಯ, ವಿಂಧ್ಯ ಮತ್ತು ಪಾರಿಯಾತ್ರ.

ನೂರು ಕನ್ಯಾದಾನವನು ಭಾ
ಗೀರಥೀಸ್ನಾನವನು ಮಿಗೆ ಕೈ
ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು
ಊರುಗಳ ನೂರಗ್ರಹಾರವ
ಧಾರೆಯೆರೆತ್ತಂತೆ ಫಲ ಕೈ
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದವಗೆ ೧೦೬

ಮೇರುಮಂದರನಿಭಸುವರ್ಣವ
ವಾರಿಮಧ್ಯದೊಳಿರುವ ಅವನಿಯ
ನಾರಿಯರ ಗಾಯತ್ರಿ ಪಶುಗಳನಿತ್ತ ಫಲವಹುದು
ಧಾರಿಣಿಯೊಳೀ ಭಕ್ತಿಸಾರವ
ನಾರು ಓದುವರವರಿಗನುದಿನ
ಚಾರು ವರಗಳನಿತ್ತು ರಕ್ಷಿಪನಾದಿಕೇಶವನು ೧೦೭

ಲೋಕದೊಳಗತ್ಯಧಿಕನೆನಿಸುವ
ಕಾಕಿನೆಲೆ ಸಿರಿಯಾದಿಕೇಶವ
ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು
ಜೋಕೆಯಲಿ ಬರೆದೋದಿ ಕೇಳ್ದರ
ನಾಕುಲದಿ ಮಾಧವನು ಕರುಣಿಪ
ಶ್ರೀಕಮಲವಲ್ಲಭನು ಮಿಗೆ ಬಿಡದಾದಿಕೇಶವನು ೧೦೮

೧೦೬. ನೂರು ಕನ್ಯಾದಾನಗಳನ್ನು ಮಾಡಿದರೆ, ಗಂಗಾಸ್ನಾನವನ್ನು ಮಾಡಿದರೆ, ಗೋವುಗಳನ್ನೂ ನೂರಾರು ಅಗ್ರಹಾರಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದರೆ, ಯಾವ ಫಲವಿದೆಯೋ ಆ ಫಲವು ಈ ಹರಿಭಕ್ತಿಸಾರವನ್ನು ಕೇಳಿದವರಿಗೆ ಲಭಿಸುವುದು.

೧೦೭. ಮೇರುಮಂದರಪರ್ವತಗಳಷ್ಟು ಚಿನ್ನವನ್ನೂ ಸಮುದ್ರಪರ್ಯಂತವಾದ ಭೂಮಂಡಲವನ್ನೂ ಕನ್ನಿಕೆಯರನ್ನೂ ದಾನಮಾಡಿದರೆ, ಗಾಯತ್ರಿಯನ್ನು ಉಪದೇಶಿಸಿದರೆ, ಪಶುಗಳನ್ನು ದಾನಮಾಡಿದರೆ ಯಾವ ಫಲ ಉಂಟೋ ಅದು ಈ ಹರಿಭಕ್ತಿಸಾರವನ್ನು ಪ್ರತಿದಿನವೂ ಓದುವವರಿಗೆ ದೊರೆಯುವುದು. ಆದಿಕೇಶವನು ಅವರ ಇಷ್ಟಾರ್ಥವನ್ನು ಸಲ್ಲಿಸುವನು.

ಟಿಪ್ಪಣಿ :- ಗಾಯತ್ರಿಪಶುಗಳು = ಹಾಲುಕರೆಯುವ ಹಸುಗಳು ಎಂದು ಕೆಲವರು ಅರ್ಥಮಾಡುತ್ತಾರೆ.

೧೦೮. ಲೋಕದಲ್ಲಿ ಪ್ರಸಿದ್ಧವಾದ ಕಾಗಿನೆಲೆಯಲ್ಲಿ ನೆಲೆಸಿದ ಆದಿಕೇಶವನು ಕೃಪೆಯಿಂದ ಈ ಭಕ್ತಿಸಾರವನ್ನು ಹೇಳಿಸಿದನು. ಶ್ರದ್ಧೆಯಿಂದ ಇದನ್ನು ಬರೆದು ಓದಿ ಕೇಳಿದವರನ್ನು ಲಕ್ಷ್ಮೀಪತಿಯಾದ ಆದಿಕೇಶವನು ಅನುಗ್ರಹಿಸುವನು.

ಮಂಗಳಂ ಸರ್ವಾದಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬವಗೆ
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂ ಸಿರಿಗೊಡೆಯ ಚೆನ್ನಿಗರಾಯ ಕೇಶವಗೆ ೧

ಮಂಗಳಂ ಜಗದಾದಿಮೂರ್ತಿಗೆ
ಮಂಗಳಂ ಶ್ರಿತಪುಣ್ಯಕೀರ್ತಿಗೆ
ಮಂಗಳಂ ಕರಕಲಿತಕಚಕ್ರವಿದಳಿತನಕ್ರನಿಗೆ
ಮಂಗಳಂ ದ್ರೌಪದಿಯ ಪೊರೆದಗೆ
ಮಂಗಳಂ ಧ್ರುವರಾಜಗೊಲಿದಗೆ
ಮಂಗಳಂ ಬೇಲೂರ ಚೆನ್ನಿಗರಾಯ ಕೇಶವಗೆ ೨

ಜಯ ಸುರೇಂದ್ರವರಾರ್ಚಿತಾಂಘ್ರಿಯೆ
ಜಯ ಪುರಾಧಿಪಸಂಸ್ತುತಾತ್ಮನೆ
ಜಯ ಮಹಾಮುನಿಯೋಗಗಮ್ಯನೆ ಮೇಘಮೇಚಕನೆ
ಜಯ ಜನಕಜೆಮುಖಾಬ್ಜಮಿತ್ರನೆ
ಜಯ ಕಲಾಧಿಪಸೂರ್ಯನೇತ್ರನೆ
ಜಯ ಜಯ ಜಗನ್ನಾಥದೇವನೆ ಚೆನ್ನಕೇಶವನೆ ೩

---

ಪ್ರಿಯ ಕನ್ನಡ ಬಂಧುಗಳೆ, ೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ೯೪ನೇ ವರ್ಷದ ಹೊಸ್ತಿಲಲ್ಲಿದೆ. ಸ್ಥಾಪನೆಗೊಂಡಂದಿನಿಂದ ಇಂದಿನವರೆಗೂ ಕನ್ನಡ-ಕನ್ನಡಿಗ-ಕರ್ನಾಟಕದ ಒಳಿತಿಗೆ ಶ್ರಮಿಸುತ್ತಾ, ಕನ್ನಡಿಗರಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಎಚ್ಚರ ಮೂಡಿಸುವಲ್ಲಿ ಪರಿಷತ್ತಿನ ಪ್ರಕಟಣೆಗಳು ಮಹತ್ವದ ಪಾತ್ರ ವಹಿಸುತ್ತಾ ಬಂದಿವೆ. ನಮ್ಮ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ, ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ನನ್ನದು.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಹಾಗೂ ಹೊಸ ಪುಸ್ತಕಗಳನ್ನು ಚಿತ್ರದುರ್ಗದಲ್ಲಿ ನಡೆಯುತ್ತಲಿರುವ ಅಖಿಲ ಭಾರತ ೭೬ನೆಯ ಅಮೃತ ಮಹೋತ್ಸವ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ ಭರವಸೆ ನನಗಿದೆ.

**ಡಾ. ನಲ್ಲೂರು ಪ್ರಸಾದ್. ಆರ್. ಕೆ.**

ಅಧ್ಯಕ್ಷರು

ಕನ್ನಡ ಸಾಹಿತ್ಯ ಪರಿಷತ್ತು



**ಕನ್ನಡ ಸಾಹಿತ್ಯ ಪರಿಷತ್ತು**
**ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ**
**ಬೆಂಗಳೂರು-೫೬೦ ೦೧೮.**